# ಕನಕದಾಸರು ಅವರ ಸಾಹಿತ್ಯ ಸಮೀಕ್ಷೆ

(ದಾಸಸಾಹಿತ್ಯ ಯೋಜನೆಯ 30ನೆಯ ಕುಸುಮ)

ಸಂಪಾದಕ

ಕೆ. ಅಪ್ಪಣ್ಣಾಚಾರ್ಯ,

ವಿಶೇಷಾಧಿಕಾರಿ, ದಾಸಸಾಹಿತ್ಯ ಪ್ರಾಜೆಕ್ಟ್,

ತಿರುಮಲ ತಿರುಪತಿ ದೇವಸ್ಥಾನಗಳು, ತಿರುಪತಿ.






ತಿರುಮಲ ತಿರುಪತಿ ದೇವಸ್ಥಾನಗಳು

ತಿರುಪತಿ

1997

# ಕನಕದಾಸರು
# ಅವರ ಸಾಹಿತ್ಯ ಸಮೀಕ್ಷೆ

(ದಾಸಸಾಹಿತ್ಯ ಯೋಜನೆಯ 30ನೆಯ ಕುಸುಮ)

ಸಂಪಾದಕ

ಕೆ. ಅಪ್ಪಣ್ಣಾಚಾರ್ಯ,

ವಿಶೇಷಾಧಿಕಾರಿ, ದಾಸಸಾಹಿತ್ಯ ಪ್ರಾಜೆಕ್ಟ್,

ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ.




ತಿರುಮಲೆ ತಿರುಪತಿ ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿಗಳಾದ

**ಎಂ. ಕೆ. ಆರ್. ವಿನಾಯಕ್**, ಐ.ಎ.ಎಸ್.,

ಇವರ ಅನುಮತಿಯಿಂದ ಪ್ರಕಟಿಸಲ್ಪಟ್ಟಿದೆ.

**ತಿರುಮಲೆ ತಿರುಪತಿ ದೇವಸ್ಥಾನಗಳು**

**ತಿರುಪತಿ**

1997

KANAKA DASARU - AVARA SAHITYA SAMEEKSHA

By six authors

Edited By : **K. Appannacharya.**

T.T.D Religious Publication Series No. : 518

Copies : 3000

FIRST EDITION : 1997

Published By :
**MKR VINAYAK,** I.A.S.,
Executive Officer,
T. T. Devasthanams,
Tirupati.

Printed at :
T. T. D. Press,
Tirupati.



ಗೋವಿಂದ ಸಲಹೆನ್ನನು - ಸದಾನಂದ ಗೋವಿಂದ ಸಲಹೆನ್ನನು

# ಪ್ರಕಾಶಕರ ಮಾತು

"ಯದಾಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನ ಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್"

ಸಕಲ ಸಾತ್ವಿಕ ಲೋಕಕ್ಕೆ ಗೀತಾಚಾರ್ಯನು ನೀಡಿದ ಆಶ್ವಾಸನೆ ಇದು. ಭಗವಂತನ ಹಾಗೂ ಅವನ ಭಕ್ತರ ಅವತಾರಗಳು, ಪ್ರಬಲಿದ ಅಧರ್ಮವನ್ನು ಬದಿಗೊತ್ತಿ ಧರ್ಮದ ಪುನಃ ಪ್ರತಿಷ್ಠಾಪನೆಗಾಗಿಯೇ.

ಕಡು ಕರುಣಾಮಯನಾದ ಶ್ರೀಹರಿಯು ಜೀವಿಗಳು ಧರ್ಮಮಾರ್ಗದಿಂದ ಚ್ಯುತರಾಗದಂತೆ ನಿರಂತರ ರಕ್ಷಿಸಲು, ಭೂವೈಕುಂಠವೆನಿಸಿದ ವೆಂಕಟಾದ್ರಿಯಲ್ಲಿ ಬಂದು ನೆಲಸಿರುವನು. ಈ ಸ್ವಾಮಿಯ ಸೇವೆಗಾಗಿಯೂ, ಲೋಕದ ಉದ್ಧಾರಕ್ಕಾಗಿಯೂ ಅನೇಕ ಮಹಿತಾತ್ಮರು ವಿವಿಧ ಪ್ರಾಂತಗಳಲ್ಲಿ ಜನಿಸಿದರು. ತೆನುಗು ದೇಶದಲ್ಲಿ ಅನ್ನಮಾಚಾರ್ಯರು, ರಾಮದಾಸರು, ತ್ಯಾಗರಾಜರು, ಜನಿಸಿದರೆ, ಕರ್ನಾಟಕದಲ್ಲಿ ಶ್ರೀಪಾದರಾಜರು, ಪುರಂದರದಾಸರು, ಕನಕದಾಸರು, ವಿಜಯದಾಸರು ಜನಿಸಿದರು. ಕರ್ನಾಟಕದ ಹರಿದಾಸರೆಲ್ಲರೂ ತಮ್ಮ ವಾಗ್ಗಂಗೆಯಿಂದ ಶ್ರೀನಿವಾಸನ ಪಾದಗಳನ್ನು ಮನಮುಟ್ಟಿ ತೊಳೆದಿರುವರು. ಶ್ರೀನಿವಾಸನ ಕರುಣಾ ಕಟಾಕ್ಷದಿಂದ ಹೊರಹೊಮ್ಮಿದ ಇವರ ಸಾಹಿತ್ಯ ಮಾಸಲಳಿಯದ ನಿತ್ಯ ನೂತನ ಸಜೀವ ವಿಶ್ವಸಾಹಿತ್ಯ.

ಕರ್ನಾಟಕ ಆಂಧ್ರ ರಾಜ್ಯಗಳ ಮಧ್ಯದಲ್ಲಿ ಅನಾದಿಯಿಂದ ಸತ್ಸಂಬಂಧ ಬೆಳೆದು ಬಂದಿದೆ. ಅಂದಿನ ವಿಜಯನಗರ ಸಾಮ್ರಾಜ್ಯಾಧಿಪತಿಗಳು ಈ ಎರಡು ರಾಷ್ಟ್ರಗಳ ಪರಿಪಾಲಕರಾಗಿದ್ದು ಉಭಯ ರಾಜ್ಯಗಳ ಕಳಾಸಾಹಿತ್ಯಗಳನ್ನು ಸಮಾನವಾಗಿ ಅಭಿಮಾನಿಸಿದರು.

ಇನ್ನು ಆಂಧ್ರ ಕರ್ನಾಟಕ ಹರಿದಾಸರ ಸತ್ಸಂಬಂಧವನ್ನು ಚರಿತ್ರೆಯು ಎತ್ತಿ ತೋರುತ್ತಿರುವುದು. ತೆನುಗು ಪದ ಕವಿತಾ ಪಿತಾಮಹರೆಂದು ಪ್ರಸಿದ್ಧರಾದ ಶ್ರೀ ಅನ್ನಮಾಚಾರ್ಯರು, ಶ್ರೀಪಾದರಾಜರ ಕೃತಿಗಳಿಂದ ಸ್ಫೂರ್ತಿಪಡೆದರೆಂದು ಶ್ರೀ ರಾಳ್ಳಪಲ್ಲಿ ಅನಂತ ಕೃಷ್ಣಶರ್ಮಾ ಅವರು ಅಭಿಪ್ರಾಯ ಪಟ್ಟಿದ್ದಾರೆ. ತಿರುಮಲೆಯಲ್ಲಿ ಅನ್ನಮಾಚಾರ್ಯರು ಹಾಗೂ ಪುರಂದರದಾಸರು ಭೆಟ್ಟಿಯಾಗಿ ಪರಸ್ಪರ ಸಂಭಾವಿಸಿಕೊಂಡರೆಂದು ಚಿನ್ನನ್ನ ತನ್ನ ಅನ್ನಮಾಚಾರ್ಯರ ಕಥಾಪ್ರತಿಪಾದಕವಾದ ದ್ವಿಪದ ಕಾವ್ಯದಲ್ಲಿ ಹೇಳಿರುವನು. ನಾದಯೋಗಿ ತ್ಯಾಗರಾಜರು ಕರ್ನಾಟಕ ಸಂಗೀತ ಪಿತಾಮಹರಾದ ಪುರಂದರ ದಾಸರನ್ನು ಕೊಂಡಾಡಿರುವುದು ಸರ್ವವಿದಿತ. ಇದಲ್ಲದೆ ಅನೇಕ ಕನ್ನಡ ಹರಿದಾಸರು ಆಂಧ್ರ ಭೂಮಿಯಲ್ಲಿ ಜನ್ಮಪಡೆದಿರುವರು. ಕೆಲವು ಹರಿದಾಸರ ಸ್ಮಾರಕಗಳು, ಮಂದಿರಗಳು ಇಂದಿಗೂ ಆಂಧ್ರದಲ್ಲೇ ಇರುವವು.

ಈ ಎಲ್ಲವನ್ನೂ ಮನಸ್ಸಿನಲ್ಲಿಟ್ಟು ತಿರುಮಲ ತಿರುಪತಿ ದೇವಸ್ಥಾನಗಳ ಯಾಜಮಾನ್ಯವು ಕರ್ನಾಟಕ ಹರಿದಾಸರ ಸಾಹಿತ್ಯದ ಪ್ರಚಾರಕ್ಕಾಗಿ ದಾಸಸಾಹಿತ್ಯ ಪ್ರಾಜೆಕ್ಟನ್ನು ಪ್ರಾರಂಭಿಸಿದೆ. ಪ್ರಾಜೆಕ್ಟಿನಲ್ಲಿ ಸಾಹಿತ್ಯ ವಿಭಾಗ, ಕಳಾವಿಭಾಗ, ಸಂಗೀತವಿಭಾಗ, ಮಕ್ಕಳ ವಿಭಾಗ, ಮಹಿಳಾವಿಭಾಗಗಳೆಂಬ ಐದು ವಿಭಾಗಗಳಿವೆ. ಸಂದೇಶಾತ್ಮಕಗಳಾದ ದಾಸರ ದಿವ್ಯಚರಿತ್ರೆಗಳನ್ನೂ ಅವರ ಕೃತಿಗಳನ್ನೂ ಮೇಲ್ಕಂಡ ಐದು ವಿಭಾಗಗಳ ಉದ್ದೇಶಕ್ಕನುಗುಣವಾಗಿ ವಿವಿಧ ಭಾಷೆಗಳಲ್ಲಿ ಪ್ರಕಟಿಸಬೇಕೆಂಬುದೇ ಪ್ರಾಜೆಕ್ಟಿನ ಪ್ರಧಾನೋದ್ದೇಶ.

ಭಗವದನುಗ್ರಹಕ್ಕೆ ಜಾತಿ ಪ್ರತಿಬಂಧಕವಾಗಲಾರದೆಂಬುದಕ್ಕೆ ಉದಾಹರಣೆಯಾಗಿ ನಿಂತವರು ಕುರುಬ ಜಾತಿಯ ಕನಕದಾಸರು. ಇಂಥಾ ಮಹಿತಾತ್ಮರ ಜೀವನ ಹಾಗೂ ಸಾಹಿತ್ಯದ ಪರಿಚಯವನ್ನುಂಟು ಮಾಡಬೇಕೆಂಬ ಸದುದ್ದೇಶದಿಂದ ಈ ಹೊತ್ತಿಗೆಯನ್ನು ಪ್ರಕಟಿಸುತ್ತಿದ್ದೇವೆ. ಬನ್ನಂಜೆ ಗೋವಿಂದಾಚಾರ್ಯರಂಥಾ ನುರಿತ ವಿದ್ವಾಂಸರ ಪ್ರಬಂಧಗಳಿಂದ ಕೂಡಿದ ಈ ಪುಸ್ತಕ ದಾಸಸಾಹಿತ್ಯಾಭಿಮಾನಿಗಳಿಗೆ ಆನಂದವನ್ನುಂಟು ಮಾಡುವುದೆಂದು ಭಾವಿಸುತ್ತೇನೆ.

**ಎಂ. ಕೆ. ಆರ್. ವಿನಾಯಕ್**, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

# ಮುನ್ನುಡಿ

ಹರಿದಾಸ ಸಾಹಿತ್ಯಕ್ಕೆ ಮೊದಲನೇ ಸ್ವರ್ಣಯುಗವೆನಿಸಿದ 16ನೇ ಶತಮಾನದಲ್ಲಿ ಹುಟ್ಟಿದವರು ಕನಕದಾಸರು. ಅದೇ ಶತಮಾನದಲ್ಲಿ ಬೆಳಗಿದ ಪುರಂದರದಾಸರ ಜೀವನ ದಂತೆ ಕನಕದಾಸರ ಜೀವನವೂ ಭಾವಪೂರ್ಣವಾದುದು. ಆದಿಯಲ್ಲಿ ಇಬ್ಬರೂ ಲಕ್ಷ್ಮೀಪು ತ್ರರು. ಇಬ್ಬರೂ ಶ್ರೀನಿವಾಸನ ಅನುಗ್ರಹದಿಂದ ಜನಿಸಿದವರೆ. ಇದಕ್ಕೆ ಸೂಚಕವಾಗಿಯೇ ಒಬ್ಬರ ಹೆಸರು ಶ್ರೀನಿವಾಸನಾಯಕ ಎಂದಾದರೆ ಮತ್ತೊಬ್ಬರ ಹೆಸರು ತಿಮ್ಮಪ್ಪ ಎಂದು. ಪುರಂದರದಾಸರು ಲೋಭಿಗಳು; ಕನಕದಾಸರು ಶೌರ್ಯ--ಅಧಿಕಾರ ಮದಯುಕ್ತರು. ಮಾರ್ಜಾಲ ಕಿಶೋರನ್ಯಾಯಕ್ಕೆ ಸೇರಿದ ಈ ಇಬ್ಬರ ಉದ್ಧಾರಕ್ಕಾಗಿ ಸ್ವತಃ ಶ್ರೀಹರಿಯೇ ಬಂದನು. ಇಬ್ಬರೂ ಶ್ರೀ ವ್ಯಾಸರಾಯರಲ್ಲೇ ತಪ್ತಮುದ್ರಾಂಕಿತರಾಗಿ ಮಂತ್ರೋಪದೇ ಶವನ್ನು ಪಡೆದರು. ಆದರೆ ಕನಕದಾಸರ ಜೀವನದಲ್ಲಿ ಜ್ಞಾನೋದಯವಾದ ಮೇಲೆ ಎರಡು ಹಂತಗಳು ಕಾಣುವವು. ಭಗವದನುಗ್ರಹದಿಂದ ಜ್ಞಾನಿಗಳಾದ ಕನಕದಾಸರು ಸಕಲ ಸಂಪತ್ತನ್ನು ತ್ಯಜಿಸಿ, ಆದಿಯಲ್ಲಿ ರಾಮಾನುಜಾಚಾರ್ಯರ (ವಿಶಿಷ್ಟಾದ್ವೈತದ) ಮತ ದಲ್ಲಿ ದೀಕ್ಷೆಯನ್ನು ಹೊಂದಿದರು. ಈ ವಿಷಯ ಅವರ ಸಾಹಿತ್ಯದಿಂದ ಸ್ಪಷ್ಟವಾಗುವುದು. ಕನಕದಾಸರು,

"ರಾಮಾನುಜರೇ ನಮೋ ನಮೋ
ಸ್ವಾಮಿ ಲಕ್ಷ್ಮಣರೂಪ ನಮೋ ನಮೋ "

ಎಂಬ ಈ ಕೃತಿಯಿಂದ ರಾಮಾನುಜಾಚಾರ್ಯರನ್ನು ಸ್ತುತಿಸಿರುವರು. ಮೋಹನ ತರಂಗಿಣಿಯಲ್ಲಿ ಕನಕದಾಸರು ವಿಶಿಷ್ಟಾದ್ವೈತಿಗಳಾದ ತಾತಾಚಾರ್ಯರನ್ನು ಸ್ತುತಿಸಿರು ವುದರಿಂದ, ಇವರಿಗೆ ತಾತಾಚಾರ್ಯರಲ್ಲೇ ಮಂತ್ರೋಪದೇಶವಾಯಿತೆಂದು ಊಹಿಸ ಬಹುದು. ಇದಾದ ಮೇಲೆ ಇವರು ಕೃಷ್ಣದೇವರಾಯನಿಗೆ ಗುರುಗಳಾದ ಶ್ರೀವ್ಯಾ ಸರಾಯರ ಜ್ಞಾನಕ್ಕೆ ಮನ ಸೋತವರಾಗಿ, ವ್ಯಾಸರಾಯರಿಂದ ತಪ್ತಮುದ್ರಾಂಕನವನ್ನು ಹೊಂದಿ ಮಂತ್ರೋಪದೇಶವನ್ನು ಪಡೆದರು. ಇವರ ಕೃತಿಗಳಲ್ಲಿ ದ್ವೈತಸಿದ್ಧಾಂತವು ಹಾಸು ಹೊಕ್ಕಿದೆ. ಇದು ಜ್ಞಾನಿಗಳಾದ ಕನಕದಾಸರ ಜೀವನದ ಎರಡನೇ ಹಂತ. ದೊರೆತನದ ಇವರ ಜೀವನದ ಪರಿಚಯ, ಇವರ ಕೆಲವು ಕೃತಿಗಳಿಂದ ತಿಳಿದು ಬರುತ್ತದೆ.

ರಾಗ -- ಸಾವೇರಿ　　　　　　　　ತಾಳ -- ಝಂಪೆ

ಹರಿ ನಿನ್ನ ಪರಮಾರ್ಥ ನಿರುತದಿಂದ ಎನಗೆ
ದೊರೆಯಿತೀ ಗುರುವಾದ ಹರಿಯೆ　　　　ಪ

ಗುರು ಮಂತ್ರ ಮೂಲ ಸದ್ಗುರು ಮೂರ್ತಿ ನೀನಾಗಿ
ಕರೆಯ ಸೇರಿಸಿದೆನ್ನ ಹರಿಯೇ　　　　ಅ.ಪ

ಗರುವದಲ್ಲಿಹೆನೆಂಬುದರಿತೆನ್ನ ನಿನ್ನ ದಾ-
ಸರಿಗೆ ಮಾರಿದೆಯೊ ಹರಿಯೆ
ಧುರದಲ್ಲಿ ನಾಲ್ಕು ಸಾವಿರ ನಿಲ್ಲದೆನ ದೆಸೆಗೆ
ಪರ ಹರಿಸಿದೆಯೆಲೊ ಶ್ರೀಹರಿಯೆ
ಪರಬಲವ ನೋಡಿದರೆ ಉರಿದುರಿದು ಬೀಳ್ವ ಮನ
ಸೆರೆಹಾಕಿ ನಿಲ್ಲಿಸಿದೆಯೊ ಹರಿಯೆ

ಕನಕ ದಳದಲಿ ಬಂದು ಕಲೆತನೆಂದರೆ ಫೌಜು
ಕನಕುಮನಕಾಗುವುದು ಹರಿಯೆ
ಧ್ವನಿ ಮುಖಾರ್ಭಟಿ ಮನಸಿಗಾನಂದವಪ್ಪ ದು-
ರ್ಗುಣವ ನೆಲ್ಲವ ಕಳೆದೆ ಹರಿಯೆ
ಮನಸಿ ನೊಳಗೆರಡಿಲ್ಲ ಮದದಾನೆ ಮೇಲ್ಕಡಿವ
ಮನವ ಹಿಮ್ಮೆಟ್ಟಿಸಿದೆ ಹರಿಯೆ
ಮೊನೆಗಾರ ಧಣಿಯೆಂಬ ಧೈರ್ಯವ ಬಿಡಿಸಿ ಸೇವ--
ಕನ ಮಾಡಿಸಿದೆಯೊ ಹರಿಯೆ

ಶರದಿಷು ಖ್ಯಾತಿ ಪೌರುಷ ಲೋಭ ಬಹುಜನರ
ಉರುವೀಶರನ್ನು ಕೈಪಿಡಿದೆ ಹರಿಯೆ
ಮರೆವು ತಾಮಸ ಅಹಂಕಾರ ದುರ್ಮತಿಯೆಂಬ
ದುರಿತವನು ಹೊರಡಿಸಿದೆ ಹರಿಯೆ
ಪರಮ ಮೂರ್ಖನು ನಿನ್ನ ಅರಿವಿದ್ದ ದಾಸರಿಗೆ
ಶರಣೆನದ ರಾಜಸವೊ ಹರಿಯೆ
ಸಿರಿ ಬಿಡಿಸಿ ಹರಿಯೆ ಹರಸುರರಿಗಳವಲ್ಲದಿಹ
ಸ್ಮರಣೆ ಜಿಹ್ವೆಗೆ ಬರೆದೆಯೋ ಹರಿಯೆ

ಮೊದಲು ನಿನ್ನುಪದೇಶ ಸದರು ಮಾಡದೆ ತಿರುಗು--
ವುದನೆಲ್ಲ ಉದುರಿಸಿದೆ ಹರಿಯೆ
ಇದು ರಹಸ್ಯವು ಎಂದು ಹಿತವು ತೋರಿತು ಇಂದು
ಪದವ ಜಯಿಸಿದೆ ನಾನು ಹರಿಯೆ
ಮದವೆಲ್ಲ ಬಿಡಿಸಿ ಸನ್ಮದುರೂಪವನು ಧರಿಸಿ
ಹೃದಯದಲ್ಲಿ ನೀನಿದ್ದೆ ಹರಿಯೆ

ಮುದದಿ ನಿನ್ನಯ ನಾಮ ಸದರ ತೋರಿತು ಎನಗೆ
ಬದುಕಿದೆನು ಬದುಕಿದೆನು ಹರಿಯೆ ೪

ಸ್ವಾರಿ ಹೊರಟರೆ ಛತ್ರ ಭೇರಿಯು ನಗಾರಿಗಳು
ಭೋರೆಂಬ ಪೊಂಗಹಳೆ ಹರಿಯೆ
ಧೀರ ರಾಹುತರಾಣ್ಯ ಪರಿವಾರಲಂಕಾರ
ಭಾರವನು ತೆಗೆದೆಯೋ ಹರಿಯೆ
ನೀರ ಸಂಗವ ಬಿಟ್ಟು ಆಣಿಮುತ್ತಾದ ಕ್ರಿಯೆ
ಸೇರಿದೆನೊ ನಿನ ಪಾದ ಹರಿಯೆ
ಆರಿಗಂಜೆನೊ ನಾನು ಅಧಿಕಪುರಿ ಕಾಗಿನೆಲೆ--
ಯಾದಿ ಕೇಶವರಾಯ ಹರಿಯೆ ೫

ಇದು ಕನಕದಾಸರ ಪಾಳೇಗಾರಿಕೆಯ ತನವನ್ನು, ಆ ಸಮಯದಲ್ಲಿ ಅವರಿಗಿದ್ದ ಸಿರಿ, ಸಂಪತ್ತು, ಮಂದಿ, ಮಾರ್ಬಲ, ಬಲ, ದರ್ಪಗಳನ್ನು ಎತ್ತಿ ತೋರುವುದು. ಈ ಹಾಡಿನಲ್ಲಿ ನಿಗೂಢವಾಗಿಟ್ಟ ಮುಂದಿನ ಕಥಾಭಾಗವನ್ನು "ಸಾಲದೆ ನಿನ್ನ ದೊಂದೆ ದಿವ್ಯ ನಾಮ" ಎಂಬ ಕೃತಿಯಲ್ಲಿ ಈ ರೀತಿಯಾಗಿ ತೋರಿದ್ದಾರೆ :

ರಣದೊಳಗೆ ದೇಹವ ಖಂಡ ತುಂಡವ ಮಾಡಿ
ರಣವ ನುತ್ತರಿಸಿ ಮರಣವ ತೋರಿದೆ
ಪ್ರಣವಗೋಚರನಾಗಿ ಲೀಲೆಯಿಂದಲಿ ಬಂದು
ಹೆಣಕೆ ಪ್ರಾಣವನು ತಂದಿತ್ತ ಮಹಾತುಮ್ಮನೆ ೧

ತೂಂತಿಕೊಂಡೆನ್ನ ಬೆನ್ನಲೊಸರುವ ರೋಹಿತಕೆ
ಅಂತ್ಯ ಮುಖ ಗ್ರಹಗಳನು ಕಳಚಿ ಬಿಸುಟಿ
ತಿಂತ್ರಿಣಿ ಮರದಡಿ ಉರಗ ಕಚ್ಚಿ ಒರಗಿರಲು
ಮಂತ್ರಿಸಿ ಮನೆಗೆ ಕಳುಹಿದ ಗರುಡ ಗಮನನೆ ೨

ಓದಿಕೇಳಿದರಿದೇ ಕಥೆಯಾಗುತಿದೆ ದೂರ--
ಆದಿ ಮೂರುತಿ ಕಾಗಿನೆಲೆಯಾದಿ ಕೇಶವನೆ
ಹೋದ ಜೀವನಕೆ ವೈದ್ಯನ ಸ್ಮರಣೆಯನ್ನಿಟ್ಟು
ವಾದ ಗುಣ ಬಿಡಿಸಿ ದಾಸನ ಮಾಡಿಕೊಂಡೆಯೊ ೩

ಇದರಿಂದ ರಣರಂಗದಲ್ಲಿ ಮೃತಪ್ರಾಯರಾಗಿ ಬಿದ್ದಿದ್ದ ಕನಕದಾಸರಿಗೆ, ಶ್ರೀಹರಿಯ ಅನುಗ್ರಹದಿಂದೆ ಪುನಃ ಚೈತನ್ಯ ಬಂತೆಂದು ತಿಳಿದು ಬರುತ್ತದೆ. ಇದರಂತೆ ಒಮ್ಮೆ

ಕನಕದಾಸರಿಗೆ ಹಾವು ಕಚ್ಚಿತ್ತೆಂತಲೂ, ಆಗಲೂ ಕೇಶವನೇ ರಕ್ಷಿಸಿದನೆಂತಲೂ ತಿಳಿದು ಬರುತ್ತದೆ. ಕೇಶವನು ಆಗಾಗ ಕನಕದಾಸರಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ತನ್ನ ದಾಸನಾಗಲು ಕೇಳುತ್ತಿದ್ದನಂತೆ. ಆಗ ಕನಕದಾಸರು "ನಿನಗೆ ನಾನೇಕೆ ದಾಸನಾಗಬೇಕು ?" ಎಂದು ವಾದಿಸುತ್ತಿದ್ದರಂತೆ. ಪರಂಪರೆಯಿಂದ ಕೇಳಿ ಬರುತ್ತಿರುವ ಈ ಕಥೆಯನ್ನು, "ವಾದಗುಣ ಬಿಡಿಸಿ ದಾಸನ ಮಾಡಿಕೊಂಡೆ" ಎಂಬ ವಾಕ್ಯವು ಸೂಚಿಸುತ್ತಿರುವುದು.

ಇನ್ನು ವ್ಯಾಸರಾಯರ ಶಿಷ್ಯರಾದಮೇಲೆ ಕನಕದಾಸರ ಜೀವನದಲ್ಲಿ ನಡೆದ ಕೆಲವು ವಿಶೇಷ ಘಟನೆಗಳು, ಪುರಂದರದಾಸರ ಕೃತಿ ಎಂದು ಹೇಳಲಾಗುತ್ತಿರುವ,

"ಕನಕ ದಾಸನ ಮೇಲೆ ದಯಮಾಡಲು ವ್ಯಾಸ
ಮುನಿಯ ಮಠದವರೆಲ್ಲ ದೂರಿ ಕೊಂಬುವರು"

ಎಂಬ ಈ ಕೃತಿಯಿಂದ ವ್ಯಕ್ತವಾಗುತ್ತಿರುವವು. ಆದರೆ ಈ ಕೃತಿಯ ಬಗ್ಗೆ ಸ್ವಲ್ಪ ಆಲೋಚಿಸಬೇಕಾಗಿದೆ.

ಪ್ರಕೃತ ಉಪಲಬ್ಧವಿರುವ ಕನಕದಾಸರ ಕೃತಿಗಳಲ್ಲಿ ಸಮಾಜದ ಲೋಪದೋಷಗಳನ್ನು ಎತ್ತಿ ತೋರುವ ಹಾಗೂ ಸಮಾಜಕ್ಕೆ ಬೇಕಾಗುವ ನೀತಿಯನ್ನು ಬೋಧಿಸುವ ಕೃತಿಗಳು ಅಧಿಕ ಸಂಖ್ಯೆಯಲ್ಲಿ ಕಾಣುತ್ತಿವೆ. ವ್ಯಾಸರಾಯರ ಶಿಷ್ಯರೆನಿಸಿ ಪುರಂದರದಾಸರ ಸಹವಾಸದಲ್ಲಿ ಕನಕದಾಸರು ಮಾಧ್ವ ಸಂಪ್ರದಾಯಕ್ಕನುಗುಣವಾಗಿ ಕೃತಿಗಳನ್ನು ರಚಿಸಿರುವರು.

ಇಂಥಾ ಕನಕದಾಸರ ಸಾಹಿತ್ಯದ ಪರಿಚಯವನ್ನು ಸಹೃದಯರಿಗೆ ನೀಡಬೇಕೆಂಬ ಸದುದ್ದೇಶದಿಂದ ದಾಸಸಾಹಿತ್ಯ ಪ್ರಾಜೆಕ್ಟ್ ಈ ಹೊತ್ತಿಗೆಯನ್ನು ಬಿಡುಗಡೆ ಮಾಡುತ್ತಿದೆ. ಇಲ್ಲಿರುವ ಎಲ್ಲಾ ವ್ಯಾಸಗಳು ಉಡುಪಿಯಲ್ಲಿ ನಡೆದ "ವಾದಿರಾಜ -- ಕನಕದಾಸ ಮಹೋತ್ಸವ"ದಲ್ಲಿ ಪಂಡಿತರಿಂದ ಮಂಡಿಸಲ್ಪಟ್ಟವುಗಳಾಗಿವೆ.

"ಕನಕದಾಸರ ವ್ಯಕ್ತಿತ್ವ"ದ ಬಗ್ಗೆ ಡಾ. ಟಿ. ಯನ್. ನಾಗರತ್ನ, "ಕನಕದಾಸರ ಕೃತಿಗಳಲ್ಲಿ ಗೇಯತೆ"ಯ ಬಗ್ಗೆ ಎಂ. ರಾಜಗೋಪಾಲಾಚಾರ್ಯ, "ಕನಕದಾಸರ ಮೋಹನ ತರಂಗಿಣಿ" ಎಂಬ ವಿಷಯದ ಮೇಲೆ ಡಾ. ಹೊಸಬೆಟ್ಟು ಸೀತಾರಾಮಾಚಾರ್ಯ, "ಕನಕದಾಸರ ಕೀರ್ತನೆಗಳಲ್ಲಿ ಸಾಮಾಜಿಕ ಸಾಹಿತ್ಯಕ ಮೌಲ್ಯಗಳು" ಎನ್ನುವುದರ ಬಗ್ಗೆ ಡಾ. ಪಿ. ರಾಮಭಟ್ಟ, "ಕನಕದಾಸರ ಕೀರ್ತನೆಗಳಲ್ಲಿ ಕೆಲವು ಛಂದೋರೂಪಗಳು" ಎನ್ನುವ ವಿಷಯದ ಮೇಲೆ ಕೆ.ಜಿ. ನಾರಾಯಣ ಪ್ರಸಾದ್, "ಕನಕದಾಸರ ಸಾಹಿತ್ಯದಲ್ಲಿ ತತ್ವಜ್ಞಾನ" ಎಂಬ ವಿಷಯದ ಮೇಲೆ ವಿದ್ಯಾವಾಚಸ್ಪತಿ ಬನ್ನಂಜೆ ಗೋವಿಂದಾಚಾರ್ಯರು - ಇವರೆಲ್ಲರೂ ತಮ್ಮ ವ್ಯಾಸಗಳನ್ನು ಉತ್ತಮವಾದ ರೀತಿಯಲ್ಲಿ ಮಂಡಿಸಿರುವರು. ಉತ್ಸವದಲ್ಲಿ ಭಾಗವಹಿಸಲು ಅವಕಾಶ ಕಲ್ಪಿಸಿಕೊಟ್ಟ ಉತ್ಸವ ಸಮಿತಿಯ ಸರ್ವಸಭ್ಯರಿಗೂ, ವಿಶೇಷ

ವಾಗಿ ಪ್ರೊ. ಕೆ. ರಾಮದಾಸ್ ಇವರಿಗೂ ಪ್ರಾಜೆಕ್ಟ್ ಪರವಾಗಿ ಅನಂತ ಧನ್ಯವಾದಗಳನ್ನು ಅರ್ಪಿಸುತ್ತಿರುವೆನು. ಸಲಹೆಗಳನ್ನಿತ್ತು ಪ್ರೋತ್ಸಹಿಸಿದ ಶ್ರೀ ಬನ್ನಂಜೆ ಗೋವಿಂದಾಚಾರ್ಯರಿಗೆ ನನ್ನ ಪ್ರತ್ಯೇಕ ವಂದನೆಗಳು.

ಇದರಂತೆ ಎಲ್ಲಾದಾಸರ ಸಾಹಿತ್ಯದ ಸಂಕ್ಷೇಪ ಪರಿಚಯವನ್ನು ನೀಡಬೇಕೆಂದು ಪ್ರಾಜೆಕ್ಟ್ ಸಂಕಲ್ಪಿಸಿದೆ. ಇದಕ್ಕೆ ಸ್ತೋತ್ಸಾಹಿಗಳಾದ ಸಹೃದಯ ವಿದ್ವಾಂಸರ ಸಲಹೆಗಳೂ ಸಹಕಾರಗಳೂ ಅತ್ಯಾವಶ್ಯಕ. ಹಿನ್ನೆಲೆಯಲ್ಲಿ ನಿಂತು ನನ್ನನ್ನು ಈ ಕಾರ್ಯದಲ್ಲಿ ಪ್ರೋತ್ಸಹಿಸುತ್ತಿರುವ, ಹಿಂದೂಧರ್ಮ ರಕ್ಷಣೆಗಾಗಿ ಬದ್ಧ ಕಂಕಣರಾಗಿರುವ; ಶ್ರೀನಿವಾಸನ ಪರಮಾನುಗ್ರಹಕ್ಕೆ ಪಾತ್ರರಾದ ಶ್ರೀ ಎಂ. ಕೆ. ಆರ್. ವಿನಾಯಕ್, ಐ.ಎ.ಎಸ್., ಕಾರ್ಯನಿರ್ವಹಣಾಧಿಕಾರಿ, ತಿರುಮಲ ತಿರುಪತಿ ದೇವಸ್ಥಾನಗಳು ಇವರಿಗೆ ನನ್ನ ಹೃದಯಪೂರ್ವಕ ವಂದನೆಗಳು. ಸುಂದರವಾಗಿ ಮುದ್ರಿಸಿಕೊಟ್ಟ ಎಮ್. ಲಕ್ಷ್ಮಣ ರಾವ್, ತಿ.ತಿ.ದೇ. ಪ್ರಸ್‌ಮೇನೇಜರ್ ಇವರಿಗೆ ಮತ್ತು ಪ್ರಸ್ ಸಿಬ್ಬಂದಿಯವರಿಗೆ ಧನ್ಯವಾದಗಳನ್ನು ಅರ್ಪಿಸುತ್ತಿದ್ದೇನೆ.

**ಕೆ. ಅಪ್ಪಣ್ಣಾಚಾರ್ಯ**
ವಿಶೇಷಾಧಿಕಾರಿ
ದಾಸಸಾಹಿತ್ಯ ಪ್ರಾಜೆಕ್ಟ
ತಿ.ತಿ.ದೇ., ತಿರುಪತಿ.

# ಅರ್ಪಣೆ

ರಾಗ -- ಕೇದಾರಗೌಳ ತಾಳ -- ಅಟ

ತನು ನಿನ್ನದು ಜೀವನ ನಿನ್ನದು ಪ

ಅನುದಿನದಲಿ ಬಾಹೊ ಸುಖ ದುಃಖ ನಿನ್ನದಯ್ಯ ಅ.ಪ

ಸವಿನುಡಿ ವೇದ ಪುರಾಣ ಶಾಸ್ತ್ರಂಗಳ
ಕಿವಿಯಿಂದ ಕೇಳುವ ಕಥೆ ನಿನ್ನದೊ
ನವಮೋಹನಾಂಗೇರ ರೂಪವ ಕಣ್ಣಿಂದ
ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯ ೧

ಒಡಗೂಡಿ ಗಂಧ ಕಸ್ತೂರಿ ಪರಿಮಳಗಳ
ಬಿಡದೆ ಲೇಪಿಸಿ ಕೊಂಬುದು ನಿನ್ನದು
ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ
ಕಡುರುಚಿಗೊಂಡರೆ ಆ ರುಚಿ ನಿನ್ನದಯ್ಯ ೨

ಮಾಯಾಪಾಶದ ಬಲೆಯೊಳಗೆ ಸಿಲ್ಕಿರುವಂಥ
ಕಾಯ ಪಂಚೇಂದ್ರಿಯಗಳು ನಿನ್ನವೊ
ಕಾಯಜ ಜನಕ ಒಡೆಯ ಆದಿಕೇಶವ--
ರಾಯ ನೀನಲ್ಲದೆ ನರರು ಸ್ವತಂತ್ರರೆ ೩

ಆದಿಕೇಶವಾಭಿನ್ನ ಶ್ರೀ ಶ್ರೀನಿವಾಸನ ಪಾದಾರವಿಂದಗಳಲ್ಲಿ
ಸರ್ವವೂ ಸಮರ್ಪಿತವು

# ಪರಿವಿಡಿ



***

ಟಿ. ಎನ್. ನಾಗರತ್ನ,
ಕನ್ನಡ ಅಧ್ಯಯನ ಸಂಸ್ಥೆ,
ಮಾನಸಗಂಗೋತ್ರಿ, ಮೈಸೂರು.

ಸುಮಾರು 400 ವರ್ಷಗಳ ಹಿಂದೆ ಕನ್ನಡನಾಡಿನ ಧಾರವಾಡ ಜಿಲ್ಲೆಯ 'ಬಾಡ' ಲ್ಲಿ ಜನಿಸಿದ ಕನಕದಾಸರು ಇಂದಿಗೂ ಕನ್ನಡಿಗರ ಮನ -- ಮನೆಗಳಲ್ಲಿ ಪ್ರಾತಃ ಯರಾಗಿದ್ದಾರೆ. ಬೀರಪ್ಪ-- ಬಚ್ಚಮ್ಮ ದಂಪತಿಗಳ ಮಗನಾಗಿ ಜನಿಸಿದ (ಕ್ರಿ.ಶ. 1606) ತಿಮ್ಮಪ್ಪ ತಂದೆಯ ಅನಂತರ ತಾನೇ ಧಣಾಯಕನಾಗಿ ವಿಜಯನ ಅರಸನಿಗೆ ಗುತ್ತಿಗೆ ದಾರನಾಗಿದ್ದು, ಸುತ್ತಲ ಗ್ರಾಮಗಳ ರೈತರಿಂದ ಕಂದಾಯ ು ಮಾಡಿ ಅದನ್ನು ನಿಗಧಿಯಾಗಿ ಅರಸರಿಗೆ ಒಪ್ಪಿಸುತ್ತಿದ್ದ. ಕಾಲಕ್ರಮದಲ್ಲಿ ತಿಮ್ಮ ೂಮಿಯಲ್ಲಿ ಹೂಳಿಟ್ಟ ನಿಧಿಸಿಕ್ಕದ್ದರಿಂದ ಜನ ಅವನನ್ನು 'ಕನಕ', 'ಕನಕನಾಯಕ' ಕರೆದು ಗೌರವಿಸಿದರೆಂದು ತಿಳಿದುಬರುತ್ತದೆ. ಮಹಾ ಪರಾಕ್ರಮಿಯೂ, ದಕ್ಷ ುಕನೂ ಆಗಿದ್ದ ಕನಕ ತನಗೆ ದೊರೆತ ನಿಧಿಯಿಂದ ಕಾಗಿನೆಲೆ ಎಂಬಲ್ಲಿ ಒಂದು ೇವಾಲಯವನ್ನು ಕಟ್ಟಿಸಿ, ತನ್ನ ಜನ್ಮಸ್ಥಳವಾದ ಬಾಡದಲ್ಲಿದ್ದ ಆದಿಕೇಶವನ ಯನ್ನು ತಂದು ಆ ದೇವಾಲಯದಲ್ಲಿ ಪ್ರತಿಷ್ಠಿಸಿದನು.

ಂಗಿರಲು ಕೆಲವು ಕಾಲಾನಂತರ ಅವನ ಹೆಂಡತಿ ಸತ್ತುಹೋದಳು. ಆ ನೋವು ಮೊದಲೇ ವೃದ್ಧೆಯಾದ ತಾಯಿಯೂ ತೀರಿಕೊಂಡಳು. ಈ ಎರಡು ಬಲವಾದ ಳಿಂದ ಕನಕನಾಯಕನ ಮನಸ್ಸಿಗೆ ಭಾರೀ ನೋವಾಗಿ ಮುಂದೆ ಅವನ ಜೀವ ೇ ಬದಲಾಯಿಸುವಂತಾಯಿತು. ಇದಕ್ಕೆ ಜೊತೆಯಾಗಿ ಅವನಿಗೆ ಒದಗಿಬಂದ ಂದರ್ಭದಲ್ಲಿ ಉಂಟಾದ ಸಾವು ನೋವುಗಳೂ ಕಾರಣವಾಗಿ, ಒಂದು ಶುಭ ಲ್ಲಿ ಜೀವನದಲ್ಲಿ ಜುಗುಪ್ಸೆ ಮೂಡಿ ಅಧಿಕಾರವನ್ನು ಕೈಬಿಟ್ಟು ಅವನು ಶ್ರೀ ಯರ ಶಿಷ್ಯನಾದಂತೆ ತಿಳಿದು ಬರುತ್ತದೆ. 'ಆದಿಕೇಶವ' ಅಂಕಿತದಲ್ಲಿ ಹರಿದಾ ಕನಕದಾಸರೆಂದು ಕರೆಸಿಕೊಂಡ ಅವರು ಕನ್ನಡದಲ್ಲಿ ಅನೇಕ ಕೀರ್ತನೆಗಳನ್ನು ರೆ.

ನಕದಾಸರ ಆ ಕೀರ್ತನೆಗಳೆಲ್ಲವನ್ನೂ ಒಟ್ಟಾಗಿ ಪರಿಭಾವಿಸಿದಾಗ ಕನಕದಾಸರ ತನ ತೊಳಲಿ ಬಳಲಿ, ಸಿದ್ಧಿಯ ನೆಲೆಗೇರಿರುವುದನ್ನು ಹಂತ ಹಂತವಾಗಿ ಗುರು ದು. ತಮ್ಮನ್ನು ಹರಿಸೇವೆಗೆ ಅಡ್ಡಿಪಡಿಸುವ ಮೋಹ, ಪಾಶ, ಮಮತೆಗಳನ್ನು ಆ ು ಎದುರಿನಲ್ಲೇ ತೋಡಿಕೊಳ್ಳುತ್ತಾ :

ಟ್ಟು ಮಾಡಿಕೊಂಡಿರ್ದೆ ಕಂಡವರಿಗೆ ಕಾರ್ಪಣ್ಯ
ಟ್ಟು ಬಡವನಾದೆನಲ್ಲಯ್ಯ ಕೃ-

ಗೊಟ್ಟು ರಕ್ಷಿಸುವರಿಲ್ಲ, ಜನ್ಮಜನ್ಮಂಗಳಲ್ಲಿ
ಪುಟ್ಟುವಂತೆ ಮಾಡಬೇಡ ಮಾಧವ ಮನ್ನಿಸೊ ಎನ್ನ
ಮಡದಿ ಮಕ್ಕಳೆಂಬ ಪಾಶಮಮತೆ ಎನ್ನ ಕೊರಳುಸುತ್ತಿ
ಬಿಡದೆ, ಸುತ್ತಿಕೊಂಡಿತಲ್ಲಯ್ಯ ಪಡೆದ ದ್ರವ್ಯವೆಲ್ಲ.......

--ಎಂದು ತಮ್ಮ ಸ್ಥಿತಿಯನ್ನು ಬಿಚ್ಚಿಡುತ್ತಾರೆ.

ಸಾಕುಸಾಕು ಮನುಜ ಸೇವೆಯು ರಂಗಯ್ಯ ಇನ್ನು ಪ

ಸಾಕು ಸಾಕು, ಮನುಜಸೇವೆ ಮಾಡಿದಣಿದು ನೊಂದೆನಾನು
ಬೇಕು ನಿನ್ನ ಪಾದಭಜನೆ ಲೋಕದೊಡೆಯ ರಂಗರಾಯ ಅ.ಪ

ಹೊತ್ತ ರೆದ್ದು ಹೋಗಿ ಪರರ ಚಿತ್ತವೃತ್ತಿಯನ್ನೆ ಅರಿತು
ನಿತ್ಯದಲ್ಲಿ ಹಲವು ಕೆಲಸ ಭೃತ್ಯನಂತೆ ಮಾಡಿ ರಿಕ್ತ
ಹಸ್ತದಿಂದ ಮನೆಗೆ ಸೇರುವೆ ಆಸೆಗಾಗಿ
ಮತ್ತೆ ಕಂಡಕಡೆಗೆ ತೊಲಗುವೆ ಬಂದು ಅಪರ
ರಾತ್ರೆಯಲಿ ತಿಂದು ಒರಗುವೆ ರಂಗಯ್ಯ ೧

ಸ್ನಾನಮೌನ ನಿತ್ಯ ಸಂಧ್ಯಾನ ನೇಮಗಳನೆ ತೊರೆದು
ಹೀನನಾಗಿ ಕೆಟ್ಟ ಜನರ ಮನೆಗಳನ್ನು ತಿರುಗಿ ತಿರುಗಿ
ಶ್ವಾನನಂತೆ ದಿನವ ಕಳೆವೆನೊ ದುರಾಸೆಯನ್ನು
ಮನದಲಿಟ್ಟುಕೊಂಡು ಕುದಿವೆನೊ ಕೊನೆಗೂ ಎಳ್ಳುಕಾ
ಳಿನಷ್ಟು ಸುಖವ ಕಾಣೆನೊ ರಂಗಯ್ಯ ೨

ಒಡಲಿ ನಾಸೆಗಾಗಿ ನೊಣವು ತುಡುಕಿಬಿದ್ದು ಜೇನಿನೊಳಗೆ
ಮಿಡುಕುವಂತೆ ಬಾಯ ಬಿಡುವೆ ಬಿಸರುಹಾಕ್ಷನೆ
ಬಿಡಿಸೊ ಎನ್ನ ಬಂಧಪಾಶವ ಕಾಗಿನೆಲೆ ಯಾದಿಕೇಶವ...... ೩

ಎಂದು ಪರಿಪರಿಯಾಗಿ ಹರಿಯನ್ನು ಮೊರೆಹೊಕ್ಕಿದ್ದಾರೆ. 'ಎಳ್ಳುಕಾಳಿನಷ್ಟು ಭಕ್ತಿ'ಯೂ ಇಲ್ಲದ 'ತಿರುಕ ನಾನು', 'ನರಜನ್ಮಹುಳು ನಾನು'; 'ಮರುಳು ಪಾಪಿಯು ನಾನು'; ಎಂದು ಮುಂತಾಗಿ ತಮ್ಮನ್ನು ಹಳಿದುಕೊಂಡು ಗಜೇಂದ್ರ, ಅಜಾಮಿಳ, ಧ್ರುವರಿಗೆ ಒಲಿದಂತೆ ತಮಗೂ ಕರುಣಿಸಬೇಕೆಂದು ಹರಿಗೆ ಶರಣಾಗಿದ್ದಾರೆ. ಹರಿಯ ಒಲವನ್ನು ಪಡೆಯಲು ಒಮ್ಮೆ--

'ದಾಸ ದಾಸರ ಮನೆಯ ದಾಸಿಯರ ಮಗನಾನು,
ಸಾಸಿರ ನಾಮದೊಡೆಯ ರಂಗಯ್ಯನ ಮನೆಯ'

ಎಂದು ತಮ್ಮನ್ನೇ 'ಮಂಕು', 'ಮರಳುದಾಸ' ಎಂದೆಲ್ಲ ಕರೆದುಕೊಂಡು ದಾಸತ್ವವ ನ್ನಾರೋಪಿಸಿಕೊಂಡರೆ ಇನ್ನೊಮ್ಮೆ--

'ಮುಟ್ಟದಿರೋ ಎನ್ನನು ರಂಗಯ್ಯ
ಮುಟ್ಟದಿರೋ ಎನ್ನ ಮುಂಗೈಯ್ಯ ಮುರಾರಿ
ಮುತ್ತೆಲ್ಲ ಸಡಲ್ಯಾವೊ ಹೇ ಮುದ್ದುರಂಗ ಮೋಹನಾಂಗ......'

ಎಂದು ತಮ್ಮಲ್ಲಿ ಹೆಣ್ತನವನ್ನಾರೋಪಿಸಿಕೊಂಡಿರುವುದೂ ಕನಕದಾಸರ ಕೀರ್ತನೆ ಗಳಲ್ಲಿ ಕಾಣಸಿಗುತ್ತದೆ.

'ಇಂದು ನೀ ಕರೆತಾರೆ ಸಖಿಯೆ ಶ್ರೀ ಗೋವಿಂದನ, ಮುನಿಯುವಾರೆ' ಎಂದು ಹರಿಯ ವಿರಹದಿಂದ ನೊಂದು ಸಖಿಯಲ್ಲಿ ಬೇಡಿರುವರು. 'ತೋರೆ ಬೇಗನೆ ಸಖಿತೋ ರಮುತ್ತಿನಹಾರ ಭಾರವಾಗಿದೆ ಎನಗೆ' ಎಂದು ವಿರಹತಾಪದಿಂದ ಪ್ರಲಾಪಿಸಿರುವರು. ಇದ್ದಕ್ಕಿದ್ದಂತೆಯೇ, ತಾಯ್ತನವನ್ನಾರೋಪಿಸಿಕೊಂಡ ದಾಸರ ಮನಸ್ಸು ಹರಿಯನ್ನು ಮಗು ವಾಗಿ ಭಾವಿಸಿ ಮುದ್ದಾಡಿರುವುದೂ ಉಂಟು. ತಾವೇ ಯಶೋದೆಯಾಗಿ, ಕೃಷ್ಣನನ್ನು ಕಳ್ಳನೆಂದು ಕಟ್ಟಿಹಾಕಿದ ಗೋಪಿಯರಿಗೆ ಅವರಾಡುವ ಮಾತುಗಳನ್ನು ಕೇಳಿ:

'ಇಂದು ಸೈರಿಸಿರಿ ಶ್ರೀ ಕೃಷ್ಣನ ತಪ್ಪ
ಮುಂದಕೆ ನಿಮ್ಮ ಮನೆಗೆ ಬಾರನಮ್ಮ

ಮಗುವು ಬಲ್ಲುದೆ ಇಷ್ಟು ಬೆಣ್ಣೆಕದ್ದರೆ
ಬಿಗಿಯ ಬಹುದೇ ಶ್ರೀ ಚರಣವನು
ಅಗಣಿತ ಮಹಿಮನ ಅಂಜಿಸಲೇಕಮ್ಮ
ಬಗೆಯ ಬಾರದೆ ನಿಮ್ಮ ಮಕ್ಕಳಂತೆ'

ಎನ್ನುವಲ್ಲಿ ದಾಸರ ವಾತ್ಸಲ್ಯ ಭಾವದ ತಾದಾತ್ಮ್ಯ ಗಮನಾರ್ಹ. ಅಂತೆಯೇ ಕೀರ್ತ ನೆಯೊಂದರಲ್ಲಿ

'ನೆರೆದು ಗೋಪಿಯರೆಲ್ಲರು ಕೃಷ್ಣಯ್ಯನ ಕರವ ಪಿಡಿದುಕೊಂಡು
ಭರದಿಂದ ಬಂದು ಯಶೋದೆಗೆ ಚಾಡಿಯನರುಹಿದ'

ಪರಿಯನ್ನು ಹೇಳಿದ್ದಾರೆ. ಗೋಪಿಯರು 'ಬಲುಕಳ್ಳ ನಿನ್ನಮಗ' ಎಂದರೆ ಮಗು ಕೃಷ್ಣ, 'ಅಮ್ಮಯ್ಯ ಇಲ್ಲಕಾಣೆ' ಎನ್ನುತ್ತದೆ. ಹೀಗೆ ಪ್ರಶ್ನೋತ್ತರ ರೂಪದಲ್ಲಿ ಸಾಗುವಕೀ ರ್ತನೆ ತಾಯಿಯಶೋದೆ ಮಗು ಕೃಷ್ಣನನ್ನು ವಹಿಸಿಕೊಂಡು ಬರುವಲ್ಲಿಗೆ ಮುಕ್ತಾಯವಾ ಗುತ್ತದೆ. ಹೀಗೆ ಹರಿಯನ್ನು ನೋಡುವ ದಾಸರ ಭಾವ, ದೃಷ್ಟಿಗಳು ಬದಲಾದಂತೆಲ್ಲ ಅವರಲ್ಲಿ ಸಲಿಗೆ, ಆತ್ಮೀಯತೆಗಳು ಬೆಳೆಯುತ್ತಾ ಹೋಗುತ್ತವೆ. ಅದೇ ಸಲಿಗೆಯಿಂದ

ದಾಸರು ರಂಗನನ್ನು ಕುರಿತು :

'ನಿನ್ನ ನಾನೇನೆಂದೆನೊ ರಂಗಯ್ಯರಂಗ
ಎನ್ನ ನೀ ಕಾಯಬೇಕೋ' ಎಂದು ಪ್ರಾರ್ಥಿಸುತ್ತಾ,

ಧೀರ ಸೋಮಕ ವೇದಚೋರ ತಮನಸೀಳಿ
ವಾರಿಧಿಗಿಳಿದು ಪರ್ವತವನ್ನೆತ್ತಿ
ಧಾರಿಣಿಯನು ಕದ್ದ ದನುಜದಲ್ಲಣನಾದ
ನಾರಸಿಂಹ ನಿನಗೆ ಶರಣೆಂದೆನಲ್ಲದೆ
ನೀರಪೊಕ್ಕವನೆಂದೆನೆ, ಬೆನ್ನಿಲಿ ಘನ್ನ
ಭಾರಪೊತ್ತವನೆಂದೆನೆ, ಮಣ್ಣನಗೆದು
ಬೇರ ಮೆದ್ದವ ನೆಂದೆನೆ, ರಕ್ಕಸನೊಳು
ಹೋರಿ ಹೊಯ್ದನೆಂದು ಹೊಗಳಿದೆನಲ್ಲದೆ.....

ಹೀಗೆ ನಾನು ನಿನ್ನನ್ನು ಹೀಗಂದೆನೇ ಹೀಗಂದೆನೇ ಎಂದು ಕೇಳುತ್ತಲೇ ಎಲ್ಲವನ್ನೂ ಅಂದು ಮುಗಿಸಿರುವ ಕನಕದಾಸರ ಜಾಣ್ಮೆ ಮೆಚ್ಚುವಂತಹುದು. ಅವರಿಬ್ಬರ ಈ ತಿಸರಾಟದಲ್ಲಿ ಹರಿಯ ದಶಾವತಾರಗಳು ಮೂರುನುಡಿಗಳಲ್ಲಿ ಒಟ್ಟು ಆರುಬಾರಿ ಪ್ರಕಟವಾಗಿವೆ!

ಹೀಗೆ ಬಗೆಬಗೆಯಲ್ಲಿ ರಮಿಸಿ, ಕಾಡಿ ಹಾಡಿದರೂ ಒಲಿಯದ ಹರಿಯ ಬಗ್ಗೆ ದಾಸರಿಗೆ ನಿರಾಸೆ ಮೂಡಿರುವುದನ್ನೂ ಅವರ ಕೃತಿಗಳಲ್ಲಿ ಗುರುತಿಸಬಹುದು :

'ನೀನೇನು ಮಾಡಲಾಪೆ ನಾನು ಮುನ್ನ ಜನ್ಮಪಡೆದಲ್ಲದೆ ರಂಗ' ಎಂದು ತಮ್ಮನ್ನು ತಾವೇ ವಿಧಿತತ್ವದಿಂದ ಸಂತೈಸಿಕೊಂಡಿರುವರು. 'ಕ್ಷಮಿಸುವುದೆಮ್ಮ ತಪ್ಪುಗಳ ಸ್ವಾಮಿ ಕ್ಷಮಶೀಲವೆಂಬ ದಾಸೋಹ ಬಿರುದಿನೊಳು' ಎಂದು ಹರಿಗೆ ಕೈಮುಗಿದು ಶರಣಾಗತರಾಗಿರುವರು. ಇಷ್ಟೆಲ್ಲ ತಹತಹಿಸಿದ ಮನಸ್ಸಿಗೆ, ಕಳವಳಿಸಿದ ಹೃದಯಕ್ಕೆ ಆ ಹರಿಯನ್ನು ಸಾಕ್ಷಾತ್ ಎದುರಿಗೇ ಕಂಡಂತೆ ಭಾಸವಾಗುತ್ತದೆ. 'ಇದ್ದಿಯಾ ಶ್ರೀಹರಿ ನೀನೊಲಿದು ಬಂದಿದ್ದೀಯ' ಎಂದು ಹರ್ಷಿಸಿದ ದಾಸರು,

'ಹರಿ ನಿನ್ನ ಪದಕಮಲ ಕರುಣದಿಂದಲಿ ಎನಗೆ
ದೊರೆಕಿತೀ ಗುರುಸೇವೆ ಹರಿಯೆ'

ಎಂದು ಸಂತುಷ್ಟರಾಗಿ ಹಾಡಿರುವರು. ಅವರಿಗೆ ತಾವು ಹಂಬಲಿಸಿ ಕೂಗಿ ಕರೆದ ಆದಿಕೇಶವನು ತಮ್ಮ ಹೃದಯದಲ್ಲೇ ಬಂದು ನೆಲೆಯಾಗಿ ನಿಂತಂತಹ ಅನುಭವವಾಗಿದೆ. ತಮ್ಮ ಆ ಅನುಭಾವವನ್ನು--

'ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು ಪ

ಪದುಮನಾಭನ ಪಾದದೊಲುಮೆ ಎನಗಾಯಿತು ಅ.ಪ

ಹರಿತೀರ್ಥಪ್ರಸಾದ ಎನ್ನ ಜಿಹ್ವೆಗೊದಗಿತು
ಹರಿಯ ನಾಮಾಮೃತ ಕಿವಿಗೊದಗಿತು
ಹರಿಯ ದಾಸರು ಎನ್ನ ಬಂಧುಬಳಗಾದರು
ಹರಿಯ ಶ್ರೀಮುದ್ರೆ ಆಭರಣವಾಯಿತು ೧

ಮುಕುತರಾದರು ಎನ್ನ ನೂರೊಂದು ಕುಲದವರು
ಮುಕುತಿ ಮಾರ್ಗಕ್ಕೆ ಯೋಗ್ಯ ನಾನಾದೆನೊ
ಅಕಳಂಕ ಶ್ರೀಹರಿ ಭಕುತಿಗೆ ಮನ ಬೆಳೆದು
ರುಕುಮಿಣಿಯರಸ ಕೈವಶನಾದನೆನಗೆ ೨

ಇಂದೆನ್ನ ಜೀವಕ್ಕೆ ಸಕಲ ಸಂಪದವಾಯ್ತು
ಮುಂದೆನ್ನ ಜನ್ಮ ಸಫಲವಾಯಿತು
ತಂದೆ ಶ್ರೀ ಕಾಗಿನೆಲೆಯಾದಿ ಕೇಶವರಾಯ
ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತ ೩

ಎಂದು ತೃಪ್ತಿಯಿಂದ ತೋಡಿಕೊಂಡಿದ್ದಾರೆ. ಈ ಅನುಭವದ ಅನಂತರ ಅವರಿಗೆ ಎಲ್ಲಿನೋಡಿದಲ್ಲಿ ರಾಮನೇ ಕಾಣುತ್ತಾನೆ. ಅವನ ವಿಶ್ವಮೂರುತಿ, ಜ್ಞಾನರೂಪಗಳೇ ಗೋಚರಿಸುತ್ತವೆ. ದಾಸರ ಈ ಶಾಂತಭಾವದ ಮನಃಸ್ಥಿತಿಯಲ್ಲಿ ರಚಿತವಾದ 'ಪರಮಪುರುಷ ಹರಿಗೋವಿಂದ ಕರಿವರದ ನಾರಾಯಣ ಗೋವಿಂದ' ಮೊದಲಾದ ಹಲವಾರು ಕೀರ್ತನೆಗಳನ್ನು ನೋಡಬಹುದು.

ಇದು ಕನಕದಾಸರ ಕೀರ್ತನೆಗಳಲ್ಲಿ ನಾವು ಕಾಣುವ ಅವರ ಪ್ರಮುಖ ಮುಖ; ಪರಮ ಭಕ್ತರನ್ನಾಗಿ ಕಾಣುತ್ತೇವೆ. ಅವರ ಮನದ ಆಸೆ ಆಕಾಂಕ್ಷೆಗಳನ್ನೂ ಅವೆಲ್ಲವೂ ಈಡೇರಿರುವ ಸಂತೃಪ್ತಿಯ ನಿಲುವನ್ನೂ ಅವರ ಕೀರ್ತನೆಗಳು ಹೀಗೆ ಬಿಂಬಿಸಿವೆ. ಅವರ ಈ ಎಲ್ಲ ಕೀರ್ತನೆಗಳ ಹಿನ್ನೆಲೆಯಲ್ಲಿ ಮಧ್ವತತ್ವಗಳನ್ನೂ ಹಾಗೂ ಪುರಾಣಗಳ ವ್ಯುತ್ಪತ್ತಿಯನ್ನು ಕಾಣಬಹುದು. ಬ್ರಹ್ಮನಿಗೆ ತಲೆ ಹೋದದ್ದು, ಹರಿಶ್ಚಂದ್ರನಿಗೆ ಮಸಣದಡಿಗೆಯಾದದ್ದು, ಕೌರವನು ತೊಡೆಯುಡಿದು ಬಿದ್ದದ್ದು, ಕುಂತಿ ತಿರಿದುಂಡದ್ದು, ಭೀಮ ಬಾಣಸಿಗನಾದದ್ದು, ಅಸಮಬಿಲ್ಗಾರನಾದ ಅರ್ಜುನ ಬೃಹನ್ನಳೆಯಾದದ್ದು; ಕೃಷ್ಣ ದೆಣ್ಣೆಗಳ್ಳನೆಂಬುದು, ಧ್ರುವ, ಅಜಾಮಿಳ, ಶುಕ, ಶೌನಕ, ಗಂಗೆ, ರೇಣುಕೆ, ಯಶೋದೆಯರ ಪ್ರಸ್ತಾಪ; ದ್ರೌಪದಿ, ರುಕ್ಮಾಂಗದ, ರಾವಣ, ವಿಭೀಷಣ, ಹನುಮಂತ, ಅಂಬರೀಷ, ಸುಧನ್ವ, ವಿದುರ, ಗಜೇಂದ್ರರ ಪ್ರಸಂಗಗಳು ಕೀರ್ತನೆಗಳಲ್ಲಿ ಉದ್ದಕ್ಕೂ ಹಾಸುಹೊಕ್ಕಾ

ಗಿವೆ. ಇವುಗಳನ್ನು ಪ್ರಮುಖವಾಗಿ ಭಾಗವತ, ರಾಮಾಯಣ, ಮಹಾಭಾರತ ಮೊದಲಾದವುಗಳಿಂದ ಬಳಸಿಕೊಂಡಿರುವರು. ಇಲ್ಲಿ, ಉಳಿದ ಹರಿದಾಸರುಗಳಂತೆಯೇ ಇವರೂ ಜನಸಾಮಾನ್ಯರ ಪುರಾಣಸಿದ್ಧ ಮನೋಭೂಮಿಕೆಯನ್ನು ಉಪಯೋಗಿಸಿಕೊಂಡಿರುವುದನ್ನೂ ಗಮನಿಸಬಹುದು. ಇಂತಹ ಸಂದರ್ಭಗಳಲ್ಲಿ ಕನಕದಾಸರು ನಮಗೆ ಪಂಡಿತರಾಗಿ, ಶಾಸ್ತ್ರವೇತ್ತರಾಗಿ ಕಾಣಿಸಿಕೊಂಡಿದ್ದಾರೆ. ಕನಕನ ಮುಂಡಿಗೆಗಳು ಅವರ ವಿದ್ವತ್ತು, ಪಾಂಡಿತ್ಯಗಳ ಪ್ರತೀಕ. ಉಪನಿಷತ್ತು, ಪುರಾಣ, ಇತಿಹಾಸಗಳನ್ನು ಚೆನ್ನಾಗಿ ಬಲ್ಲವರು ಮಾತ್ರ ಅವನ್ನು ಅರ್ಥಮಾಡಿಕೊಳ್ಳಬಲ್ಲರು.

ಕನಕದಾಸರ ತತ್ತ್ವಪರವಾದ ಕೀರ್ತನೆಗಳನ್ನು ಪರಿಶೀಲಿಸಿದರೆ ಹರಿಸರ್ವೋತ್ತಮತ್ವ, ಹರಿಸರ್ವಸ್ವತಂತ್ರ, ತಾರತಮ್ಯತತ್ತ್ವ, ಗುರುವಿನಸ್ಥಾನ, ಗುರುವಿನ ಅವತಾರತ್ರಯದ ಕಲ್ಪನೆ, ಹರಿ ಸರ್ವಜಗತ್ತನ್ನೂ ಉದರದಲ್ಲಿ ಧರಿಸಿರುವನು, ಅಣೋರಣೀಯ, ಮಹತೋ ಮಹೀಯ ಇತ್ಯಾದಿ ತತ್ತ್ವಗಳ ಪ್ರಸ್ತಾಪ ಕಂಡುಬರುತ್ತದೆ. 'ಬಲ್ಲವರೆ ಬಲ್ಲರು ಎಲ್ಲರರಿಯರು ಫುಲ್ಲಲೋಚನ ಪರಬ್ರಹ್ಮನೆಂಬುದನು'. ಅಜ, ವಾಯು, ರುದ್ರ, ಗರುಡ, ಶೇಷಾದಿಗಳೂ, ಅಂಬರೀಷ, ಅತ್ರಿಮುನಿ, ಭೀಮ, ಸಹದೇವ, ಉದ್ಧವ, ಧ್ರುವಾದಿ ಭಕ್ತಶ್ರೇಷ್ಠರನ್ನೂ ದೇವಾನು ದೇವತೆಗಳನ್ನೂ ಈ ಮಾತಿಗೆ ಸಾಕ್ಷಿಯಾಗಿ ನಿಲ್ಲಿಸಿದ್ದಾರೆ. ಇಲ್ಲಿ ಹರಿಸರ್ವೋತ್ತಮತ್ವದೊಂದಿಗೆ ತಾರತಮ್ಯದ ಪ್ರಕಾರ ದೇವತೆಗಳನ್ನು ಹೆಸರಿಸಿರುವುದೂ ಗಮನಾರ್ಹ.

'ಅಣುಮಹತ್ತಾದಿ ದೇವ ಪ

ಅಣೋರಣೀಯಾನ್ಮಹತೋ ಮಹೀಯಾನಖಿಳ
ಗುಣಭರಿತ ಪರಮ ಪಾವನಚರಿತ'

'ವಿಶ್ವಲೋಕೇಶ ವಿಮಲೈಕ ತೇಜೋಮೂರ್ತಿ
ವಿಶ್ವ ಉದ್ಧರ ವಿಶ್ವಜ್ಞಾನರೂಪ
ವಿಶ್ವದೊಳು ಒಳ ಹೊರಗು ನೀನಲ್ಲದೆ ಬೇರೆ
ವಿಶ್ವನಾಟಕ ಸೂತ್ರಧಾರರುಂಟೆ ಹರಿಯೆ'

--ಎಂದು ಮುಂತಾಗಿ ಶ್ರೀಹರಿ ಸಮಸ್ತ ಜಗತ್ತನ್ನೂ ತನ್ನ ಉದರದಲ್ಲಿಟ್ಟವನು, ಅಣುರೇಣು ತೃಣಕಾಷ್ಠಗಳಲ್ಲಿ ವ್ಯಾಪ್ತನಾದವನು, ಅಣು ಮಹತ್ತಿನೊಳಗೆಲ್ಲ ಪರಿಪೂರ್ಣನಾದವನು ಎಂಬ ತತ್ತ್ವಗಳನ್ನು ಮತ್ತೆ ಮತ್ತೆ ಕನಕದಾಸರ ಕೀರ್ತನೆಗಳಲ್ಲಿ ಕಾಣಬಹುದು. ಹರಿ ಸರ್ವಸ್ವತಂತ್ರ, ಜೀವರಿಗೆ ಕೇವಲ ದತ್ತಸ್ವಾತಂತ್ರ್ಯಮಾತ್ರ ಎಂಬ ತತ್ತ್ವ:

'ತನು ನಿನ್ನದು ಜೀವನ ನಿನ್ನದು
ಅನುದಿನದಲಿ ಬಾಹೊ ಸುಖದುಃಖ ನಿನ್ನದಯ್ಯ'

ಎನ್ನುವ ಕೀರ್ತನೆಯಲ್ಲಿ ಭಾವಗೀತೆಯ ವಸ್ತುವಾಗಿ ನಿಂತಿದೆ. 'ಆದಿಕೇಶವರಾಯ ನೀನಲ್ಲದೆ ನರರ ಸ್ವತಂತ್ರವೆ' - ಎನ್ನುತ್ತಾರೆ. 'ಆರುಬಲ್ಲರು ಹರಿಹರಾದಿಗಳ ಮಹಿಮೆಯಲ್ಲಿ' ಎಂಬ ಕೀರ್ತನೆಯನ್ನು ಉದಾಹರಿಸಬಹುದು. ಹರಿಹರರಿಬ್ಬರೂ ಮಹಿಮಾವಂತರು ಅವರ ದೃಷ್ಟಿಯಲ್ಲಿ. ಆದರೂ 'ಹರಿಹರರೇಕಸ್ಥರು' ಎಂದು ಹೇಳುವಲ್ಲಿ ಅವರ ಮಾಧ್ವಸಂಪ್ರದಾಯ ದೃಷ್ಟಿ ಮೇಲಾಗಿದೆ. ಈ ಕೀರ್ತನೆಗಳ ಹಿನ್ನೆಲೆಯಲ್ಲಿ ಕನಕದಾಸರು ಮಾಧ್ವಮತ ತತ್ವಪ್ರಚಾರಕರಾಗಿ ಕಾಣಿಸಿಕೊಳ್ಳುತ್ತಾರೆ.

ಜಾತಿ - ಮತಗಳ ವಿಷಯದಲ್ಲಂತೂ ಕನಕದಾಸರು ಖಂಡಿತವಾದಿಗಳು. ಮನುಷ್ಯನ ಹುಟ್ಟಿನಿಂದ ಅವನ ಜಾತಿ ನಿರ್ಧರವಾಗುವುದಿಲ್ಲವೆಂಬುದು ಅವರ ದೃಢ ನಿಲುವು--

ಕುಲಕುಲ ಕುಲವೆನ್ನುತಿಹರು
ಕುಲವ್ಯಾವುದು ಸತ್ಯ ಸುಖವುಳ್ಳ ಜನರಿಗೆ
ಕೆಸರೊಳು ತಾವರೆ ಪುಟ್ಟಲು ಅದತಂದು
ಬಿಸಜನಾಭ ನಿಗರ್ಪಿಸಲಿಲ್ಲವೆ
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು
ವಸುಧೆಯೊಳಗೆ ಭೂಸುರರುಣ್ಣಲಿಲ್ಲವೆ ೧
ಆತ್ಮಯಾವಕುಲ ಜೀವಯಾವಕುಲ
ತತ್ವೇಂದ್ರಿಯಗಳ ಕುಲ ಪೇಳಿರಯ್ಯ
ಆತ್ಮಾಂತರಾತ್ಮನೆಲೆಯಾದಿಕೇಶವ
ಆತನೊಲಿದ ಮೇಲೆ ಯಾತರಕುಲವಯ್ಯ ೨

ಎಂದು ದಿಟ್ಟತನದಿಂದ ತಮ್ಮ ಮನಸ್ಸನ್ನು ಬಿಚ್ಚಿಟ್ಟಿರುವರು. ಆತ್ಮಯಾವಕುಲ? ಜೀವ ಯಾವಕುಲ? ಎಂದು ಪ್ರಶ್ನಿಸಿದ ಕೆಚ್ಚು ಕನಕದಾಸರದು. ಅವರ ದೃಷ್ಟಿಯಲ್ಲಿ 'ಲಲನೆಯ ಮೇಲೆ ದೃಷ್ಟಿಯ ಬಿಡುವ' ಕಾಮುಕ ಹೊಲೆಯ. ಪಿಸುಣಗಿನ್ನಧಿಕ ಹೊಲೆಯನುಂಟೆ? ಎನ್ನುತ್ತಾರೆ. ಜ್ಞಾನಿಯಾಗಿ ಹರಿಭಕ್ತಿಯನ್ನು ಮಾಡುವ ಚಂಡಾಲನ ಮನೆಯ ಸೇವಕರಾಗಲೂ ತಯಾರಿದ್ದಾರೆ, ಕನಕದಾಸರು. ಅಂದಬಳಿಕ ಅವರ ಈ ಭಾವನೆಯ ಸಾಂದ್ರತೆ ಎಷ್ಟರಮಟ್ಟಿನದೆಂಬುದನ್ನು ಮನಗಾಣಬಹುದು. ನಿಷ್ಠೆಯಿಲ್ಲದವನು, ಪರಿಶುದ್ಧನಡೆಯಿಲ್ಲದವನು ಯಾವ ಜಾತಿಯಲ್ಲೇ ಹುಟ್ಟಿರಲಿ ಅಂತಹವನನ್ನು ನಿರ್ಭಯವಾಗಿ, ನೇರವಾಗಿ ಟೀಕಿಸಿದ್ದಾರೆ, ಕನಕದಾಸರು :

ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೆ ಜನ್ಮ ಪ
ಸಾರ್ಥಕವಿಲ್ಲದವರೆಲ್ಲ ಭಾಗವತರೆ ಅ.ಪ
ಮೂಗ್ಹಿಡಿದು ನೀರೊಳಗೆ ಮುಳುಗಿ ಜಪತಪವ ಮಾಡಿ
ವೇದಶಾಸ್ತ್ರ ಪುರಾಣಗಳ ನೋದಿ ತಿಳಿದು

ಬಾಗಿ ಪರಸ್ತ್ರೀಯರಿಗೆ ಭ್ರಮಿಸಿ ಕಣ್ಣಿಡುವಂಥ
ನೀತಿ ತಪ್ಪಿದವರೆಲ್ಲ ದೇವಬ್ರಾಹ್ಮಣರೆ? ಕೃಷ್ಣ ೧
ಪಟ್ಟೆನಾಮವ ಬಳಿದು ಪಾತ್ರೆಕೈಯಲಿ ಪಿಡಿದು
ಗುಟ್ಟಿನಲಿ ರಹಸ್ಯವ ಗುರುತರಿಯದೆ
ಕೆಟ್ಟಕೂಗನು ಕೂಗಿ ಬಗುಳಿ ಬಾಯಾರುವಂಥ
ಹೊಟ್ಟೆಗುಡ ಮೃಗಗಳೆಲ್ಲ ಶ್ರೀವೈಷ್ಣವರೆ? ಕೃಷ್ಣ ೨
ಲಿಂಗ ಅಂಗದೊಳಗಿರುವ ಚಿನ್ಮಯವ ತಿಳಿಯದೆ
ಲಿಂಗಾಂಗದಾನೆಲೆಯ ಗುರುತರಿಯದೆ
ಜಂಗಮ ಸ್ಥಾವರದ ಭಾವವನು ತಿಳಿಯದ
ಭಂಗಿ ಮುಕ್ಕಗಳೆಲ್ಲ ಲಿಂಗವಂತರಹರೆ ೩
ಅಲ್ಲಾ ಖುದಾ ಎಂದು ಆತ್ಮದಲಿ ತಿಳಿಯದೆ
ಮುಲ್ಲ ಶಾಸ್ತ್ರದ ನೆಲೆಯ ಗುರುತರಿಯದೆ
ಜಳ್ಳುಕೂಗನು ಕೂಗಿ ಬಗುಳಿ ಬಾಯಾರುವಂಥ
ಕಳ್ಳ ತುರುಕರಿಗೆಲ್ಲ ವೀರಸ್ವರ್ಗವುಂಟೆ? ಕೃಷ್ಣ ೪

ಎಂದು ಕೇವಲ ಬಾಹ್ಯ ಆಚರಣೆಗೇ ಪ್ರಾಮುಖ್ಯವಿತ್ತು ನಡೆದುಕೊಳ್ಳುತ್ತಿದ್ದವರಿಗೆ ಗ್ರಹಚಾರ ಬಿಡಿಸಿದ್ದಾರೆ, ಕನಕದಾಸರು. ಈ ಕಾಲದಲ್ಲೂ ಒಬ್ಬರ ಜಾತಿಯ ಬಗ್ಗೆ ಮಾತನಾಡಲು ಅಕ್ಕ ಪಕ್ಕ ನೋಡುವ ಸಂದರ್ಭವಿರುವಾಗ ಸು. 400 ವರ್ಷಗಳ ಹಿಂದೆಯೇ ಇಷ್ಟು ನೇರವಾಗಿ ಹೇಳಿರುವ ಗಂಡೆದೆ ಕನಕದಾಸರದು.

'ಅಂಬರವತೊರೆಯಲೇಕೆ ತಾಂಬೂಲ ಬಿಡಲೇಕೆ
ಡಂಬಕದ ವೃತ್ತಿಯಲಿ ಇರಲೇತಕೆ
ಅಂಬುಜನಾಭನನು ಭಾವದಲಿ ನೆನೆದರೆ
ಇಂಬುಂಟು ವೈಕುಂಠವೆಂಬ ಪುರದೊಳಗೆ'

ಎಂಬ ಮಾತುಗಳಲ್ಲಿ,

'ಮಂಡೆ ಬೋಳುಮಾಡಿ ಉಂಡೆಯನ್ನು ಬರೆದುಕೆಡಿಸಿ
ಕಂಡ ಕಂಡವರ ಕೂಡಿ, ಭಂಡಜನ್ಮಹೊರೆಯುವವಗೆ' ೧

'ದಾಸಪಟ್ಟವೊ ಸನ್ಯಾಸ ಪಟ್ಟವೋ' --ಇತ್ಯಾದಿ ಮಾತುಗಳಲ್ಲಿ ದಾಸರ ವಿಡಂಬನೆ ಸ್ಪಷ್ಟವಾಗಿದೆ.

ಕನಕದಾಸರ ಹಾಸ್ಯಪ್ರವೃತ್ತಿ ಅಲ್ಲಲ್ಲಿ ಹಣಿಕಿರುವುದನ್ನೂ ಅವರ ಕೀರ್ತನೆಗಳಲ್ಲಿ ಕಾಣಬಹುದು. ಗಣಪತಿಯನ್ನು ಕುರಿತ ಉಮೆ ಹಾಗೂ ಅವಳ ಗೆಳತಿಯ ಸಂಭಾಷಣೆಯನ್ನು ಕೇಳಿ :

ಗೆಳತಿ: ನಮ್ಮಮ್ಮ ಶಾರದೆ ಉಮಾಮಹೇಶ್ವರಿ
ನಿಮ್ಮೊಳಗಿಹನ್ಯಾರಮ್ಮ ಪ

ಉಮೆ: ಕಮ್ಮಗೋಲನ ವೈರಿ ಸುತನಾದಸೊಂಡಿಲ
ಹೆಮ್ಮಯ್ಯ ಗಣನಾಥನೆ ಅ.ಪ

ಗೆಳತಿ: ಮೋರೆ ಕಪ್ಪಿನ ಭಾವ ಮೊರದಗಲಕಿವಿ
ಕೋರೆ ದಾಡೆಯವ ನ್ಯಾರಮ್ಮ

ಉಮೆ: ಮೂರು ಕಣ್ಣಿನ ಸುತ ಮುರಿದಿಟ್ಟ ಚಂದ್ರನ
ಧೀರ ತಾ ಗಣನಾಥನೆ ಅಮ್ಮಯ್ಯ ೧

ಹೀಗೆಯೇ ತಮ್ಮ ತೀರ್ಥಯಾತ್ರೆಯ ಕಾಲದಲ್ಲಿ ಊರಮುಂದಿನ ಹನುಮನನ್ನು ಕಂಡ ದಾಸರು 'ಏನೆಂದಳೇನೆಂದಳೋ ನಿನ್ನೊಳು ಸೀತೆ ಹನುಮಯ್ಯ' ಎಂದು ಬಯಲು ನಾಟಕ ಪಾತ್ರಧಾರಿಯಂತೆ ಪ್ರಶ್ನಿಸಿದ್ದಾರೆ. ಇನ್ನೊಂದು ಕಡೆ ತಾವೇ ಹನುಮಂತನಿಗೆ--

'ಎನ್ನಕಂದ ಹಳ್ಳಿಯ ಹನುಮ
ಚೆನ್ನಾಗಿದ್ದಾರೆ ಲಕ್ಷ್ಮಣದೇವರು
ತುಪ್ಪಪಂಚಾಮೃತ ಅಂದು ಅಡವಿಗಡ್ಡೆಗಳಿಂದು
ಕರ್ಪೂರ ವೀಳ್ಯವಂದು ಕುರುಕು ಇಂದು
ಸುಪ್ಪತ್ತಿಗೆ ಮಂಚವಂದು ಹುಲ್ಲು ಹಾಸಿಗೆಯಿಂದು
ಶ್ರೀಪತಿ ರಾಘವ ಕ್ಷೇಮದಲ್ಲೈದಾರೆ'

--ಎಂದು ಮುಂತಾಗಿ ರಾಮಲಕ್ಷ್ಮಣರ ಕ್ಷೇಮ ಸಮಾಚಾರವನ್ನು ತಿಳಿಸಿ ಮುಂದೆ ಸಾಗಿದ್ದಾರೆ. ಇದ್ದಕ್ಕಿದ್ದಂತೆಯೇ ತಾವು ಲಕ್ಷ್ಮೀದೇವಿಯ ಪರವಹಿಸಿ 'ನಿನಗಿಂತ ಕುಂದೇನೊ ನಮ್ಮಮ್ಮ ಜಯಲಕ್ಷ್ಮಿ' --ಎಂದು ನಾರಾಯಣನ ಮೇಲೆ ಜಗಳಕ್ಕೇ ಹೋಗಿಬಿಟ್ಟಿದ್ದಾರೆ. 'ನೀನು ಮಚ್ಛಾವತಾರನಾದರೆ ಆಕೆ ಮಚ್ಛಕಂಗಳು ತಾನಾದಳು. ಹೆಚ್ಚಿನ ಶಂಖವ ಪಿಡಿದರೆ ಆಕೆ ಸ್ವಚ್ಛ ಶಂಖ ಕಂಠಳಾದಳು' ಎಂದು ಮುಂತಾಗಿ ಕೃತಿಯ ಉದ್ದಕ್ಕೂ ಹರಿಯ ದಶಾವತಾರಗಳೊಂದಿಗೆ ಲಕ್ಷ್ಮೀದೇವಿಯ ಚೆಲುವನ್ನು ಸಮೀಕರಿಸಿ, ಹರಿಯನ್ನು ಪರಿಹಾಸ್ಯ ಮಾಡುತ್ತಾರೆ. ಅವರ ಹಾಸ್ಯ ತಿರುಪತಿಯ ತಿಮ್ಮಪ್ಪನನ್ನೂ ಬಿಟ್ಟಿಲ್ಲ :

'ಬಂದೆವಯ್ಯ ಗೋವಿಂದಸೆಟ್ಟಿ ನಿನ್ನ
ಹರಿವಾಣ ತೀರ್ಥ ಪ್ರಸಾದ ಉಂಟೆನಲಾಗಿ ಪ

ಅಪ್ಪವು ಅತಿರಸ ತುಪ್ಪವು ಚೆನಿಪಾಲು
ಒಪ್ಪುವ ಸಕ್ಕರೆ ಯಾಲಕ್ಕಿಯು

ಅಪರೂಪವಾದ ಕಜ್ಜಾಯರಾಶಿಗಳನೆಲ್ಲ
ಛಪ್ಪನ್ನ ದೇಶಕ್ಕೆ ಮಾರುವಸೆಟ್ಟಿ ೧

ಒಡೆದ ಮಡಕೆ ತಂದು ಅರೆದು ನಾಮವಮಾಡಿ
ಕೊಡುವೆ ನೀ ಕಾಸಿಗೆ ಒಂದೊಂದನು
ಒಡಲು ತುಂಬಿ ಮಿಕ್ಕ ಅನ್ನವ ಮಾರಿಸಿ
ಒಡವೆಯ ಗಳಿಸುವ ಕಡುಲೋಭಿ ಸೆಟ್ಟಿ ೨

--ಎಂದು ಅವನ ಜಿಪುಣತನವನ್ನೂ ಬಯಲಿಗೆಳೆದಿದ್ದಾರೆ.

ಈ ಎಲ್ಲ ಹಾಸ್ಯ ವಿಡಂಬನೆ, ಖಂಡಿತವಾದಗಳ ಹಿಂದೆ ಸಮಾಜದ ಬಗ್ಗೆ ಅವರಿಗಿರುವ ಕಾಳಜಿಯನ್ನು, ಕಳಕಳಿಯನ್ನು ಅವರ ಉಪದೇಶಾತ್ಮಕ ಕೀರ್ತನೆಗಳಲ್ಲಿ ಸ್ಪಷ್ಟವಾಗಿ ಗುರುತಿಸಬಹುದು:

ಸಾರಿದೂರಿ ಹೇಳುತೇನೆ ಕೆಟ್ಟಿ ಕಂಡ್ಯ ಬಡ್ಡಿಮನವೆ ಪ

ದೂರೊ ಬುದ್ಧಿ ಮಾಡಬೇಡ ಕೈಯ್ಯೊಳಿರೋ
ಕಡ್ಡಿ ನಿನ್ನ ಕೈಯ್ಯೊಳಿರೋ ಕಡ್ಡಿ ಅ.ಪ

ಎಂದು ತಮ್ಮ ಮನಸ್ಸಿಗೂ ಆ ಮೂಲಕ ಇತರರಿಗೂ ಕಡ್ಡಿ ಮುರಿದಂತೆ ಹೇಳಿಬಿಟ್ಟಿದ್ದಾರೆ. ಕೋಪ, ಮದ ಮತ್ಸರಾದಿಗಳನ್ನು ತೊರೆದು, ಪರರ ನಿಂದೆಯಿಲ್ಲಿ ಹೊತ್ತುಗಳೆಯದೆ ಆದಿಕೇಶವನ ಪಾದವನ್ನು ನಂಬಿ ಸುಖಿಯಾಗೆಂದು ಮಾರ್ಗದರ್ಶನ ಮಾಡುತ್ತಾರೆ. ಮನುಷ್ಯನ 'ಅಹಂ' ಅನ್ನು ಮಟ್ಟಹಾಕುತ್ತಾ,

ರೂಪದಲಿ ಮನ್ಮಥನೆ ಶಾಪದಲಿ ಗೌತಮನೆ
ಕೋಪದಲಿ ದೂರ್ವಾಸ ಮುನಿಯೆ ನೀನು
ತಪದಲಿ ವ್ಯಾಸನೆ ಕೃಪೆಯಲಿ ಬಲೀಂದ್ರನೆ
ನಿಪುಣತ್ವದಲಿ ನಾರದ ಮುನಿಯೆ ನೀನು ೧

..........................ನಡತೆಯಲಿ ಧರ್ಮಜನೆ
ದೃಢಮನಸಿನಲಿ ರುಕ್ಮಾಂಗದನೆ ನೀನು
ಪಡೆಯಲ್ಲಿ ಕೌರವನೆ ನುಡಿಯಲ್ಲಿ ಗಾಂಗೇಯನೆ
ಮಡದಿಯರ ಭೋಗಕ್ಕೆ ಸುರಪತಿಯೆ ನೀನು.....'

ಎಂದು ಮುಂತಾಗಿ ಅವನನ್ನು ಪ್ರಶ್ನಿಸುವ ಮೂಲಕ ಮನುಷ್ಯನ ಅಹಂಕಾರ ಸೋರಿಹೋಗುವಂತೆ ಮಾಡಿದ್ದಾರೆ. ತಾನೆಷ್ಟರವನು ಎನ್ನುವ ಅರಿವು ಅವನಿಗಾಗು

ವಂತೆ ಮಾಡಿದ್ದಾರೆ. ಕನಕದಾಸರ ಈ ತಂತ್ರ ತುಂಬ ಪರಿಣಾಮಕಾರಿಯಾಗಿದೆ. ಜೊತೆಗೆ ಇಲ್ಲಿ, ಇದಮಿತ್ಥಂ ಎಂದು ಪ್ರಸ್ತುತ ಪಾತ್ರಗಳ ಗುಣ, ಯೋಗ್ಯತೆಗಳನ್ನು ಅಳೆದಿಟ್ಟ ವಿಮರ್ಶಕರಾಗಿ ಕಾಣಿಸಿಕೊಂಡಿದ್ದಾರೆ ಕನಕದಾಸರು.

ದಾನ, ಧರ್ಮ, ಪರೋಪಕಾರಗಳನ್ನು ಮಾಡು; ಮೂಢರಸಹವಾಸವನ್ನು ಬಿಡು; ನೋಡದಿರು ಪರಸತಿಯ, ಆಡದಿರು ಮಾತುಗಳ ಗರ್ವದಿಂದ, ಶ್ರೀಹರಿಯ ಆಳಾಗಿ ನಯ ವಿನಯಗಳಿಂದ ಬದುಕು ಎಂಬುದು ಜನರಿಗೆ ಕನಕದಾಸರ ಉಪದೇಶ. ಇದರೊಂದಿಗಿರುವ 'ಹಾಳು ಸಂಸಾರಕ್ಕೆ ಹಲವರ ಬಾಯ್ಗಳ ಬಡಿಯದಿರೆಚ್ಚರಿಕೆ', 'ನಟನೆ ಬೇಡೆಚ್ಚರಿಕೆ' ಎನ್ನುವ ಮಾತುಗಳು ಗಮನಾರ್ಹ. (ಆದರೆ ನಾವು ಇಂದು ಮಾಡುತ್ತಿರುವುದು ಅದನ್ನೇ). ಈ ಮೌಲ್ಯಗಳೆಲ್ಲ ಒಂದೊಂದಾಗಿ ಕಳಚಿಕೊಳ್ಳುತ್ತಿರುವುದನ್ನು ಗಮನಿಸಿದ ದಾಸರು:

'ಸತ್ಯಧರ್ಮಗಳೆಲ್ಲ ಎತ್ತ ಪೋದವೊ ಕಾಣೆ
ಉತ್ತಮರ ಜೀವನಕೆ ದಾರಿಯಿಲ್ಲ
ನಿತ್ಯದಲಿ ಕಳವು ವ್ಯಭಿಚಾರವುಳ್ಳವರೆಲ್ಲರು
ಅರ್ಥ ಸಂಪನ್ನ ರಾಗ್ಯನುಭವಿಸುತಿಹರು'

ಎಂದು ಕೊರಗಿದ್ದಾರೆ. ಇಂದು ನಾವು ಈ ವಿಕೃತಿಗಳನ್ನು ಅವುಗಳ ಉಲ್ಬಣಾವಸ್ಥೆಯಲ್ಲಿ ಅನುಭವಿಸುತ್ತಿದ್ದೇವೆ. ನಾನೂರು ವರ್ಷಗಳ ಹಿಂದೆ ದಾಸರು ಅಲ್ಲಲ್ಲಿ ಕಂಡ ಇಂತಹ ಸಂಗತಿಗಳು ಈಗ ಕಾಲಧರ್ಮವೇ ಆಗಿಬಿಟ್ಟಿವೆ. ಘೋರ ನರಕದ ತನುವು ಎಂದು ಮನದಲಿ ತಿಳಿದು 'ಗೇರುಹಣ್ಣಿನ ಬೀಜದಂತೆ ಹೊರಗಿದ್ದು' 'ದಾಸನಾಗೋ ಭವ ಪಾಶನೀಗೋ ವಿಶೇಷ ನಾಗೋ' ಎಂಬುದೇ ಕನಕದಾಸರ ಉಪದೇಶದ ಸಾರ. ದಾಸರ ಕೀರ್ತನೆಗಳಲ್ಲಿ ಕಂಡುಬರುವ ಈ ವೈರಾಗ್ಯ ಪಲಾಯನವಾದವಲ್ಲ. ಅಥವಾ ಕೇವಲ ಆದರ್ಶದ ಮಾತುಗಳೂ ಅಲ್ಲ:

'ನೀರ ಮುಣುಗಲು ಯಾಕೆ ನಾರಿಯಳ ಬಿಡಲೇಕೆ
ವಾರಕೊಂದುಪವಾಸ ಮಾಡಲೇಕೆ
ನಾರಸಿಂಹನ ದಿವ್ಯ ನಾಮವನು ನೆನೆದರೆ
ಘೋರ ಪಾತಕವೆಲ್ಲ (ಹಾರಿ) ಹೋಗುವುದು'

ಎನ್ನುವ ನಿಲುವು ಕನಕದಾಸರದು. ಈ ಶರೀರದ ಕ್ಷಣಿಕತೆ, ಸಂಸಾರದ ನಿಸ್ಸಾರತೆಗಳ ಬಗ್ಗೆ ಇವರಷ್ಟು ತೀಕ್ಷ್ಣವಾಗಿ ಬೇರೆ ಯಾವ ಹರಿದಾಸರೂ ಹೇಳಿಲ್ಲವೆಂಬುದು ಸ್ಪಷ್ಟ

ಅಪರೂಪವಾದ ಕಜ್ಜಾಯರಾಶಿಗಳನೆಲ್ಲ
ಛಪ್ಪನ್ನ ದೇಶಕ್ಕೆ ಮಾರುವಸೆಟ್ಟಿ ೧

ಒಡೆದ ಮಡಕೆ ತಂದು ಅರೆದು ನಾಮವಮಾಡಿ
ಕೊಡುವೆ ನೀ ಕಾಸಿಗೆ ಒಂದೊಂದನು
ಒಡಲು ತುಂಬಿ ಮಿಕ್ಕ ಅನ್ನವ ಮಾರಿಸಿ
ಒಡವೆಯ ಗಳಿಸುವ ಕಡುಲೋಭಿ ಸೆಟ್ಟಿ ೨

--ಎಂದು ಅವನ ಜಿಪುಣತನವನ್ನೂ ಬಯಲಿಗೆಳೆದಿದ್ದಾರೆ.

ಈ ಎಲ್ಲ ಹಾಸ್ಯ ವಿಡಂಬನೆ, ಖಂಡಿತವಾದಗಳ ಹಿಂದೆ ಸಮಾಜದ ಬಗ್ಗೆ ಅವರಿಗಿರುವ ಕಾಳಜಿಯನ್ನು, ಕಳಕಳಿಯನ್ನು ಅವರ ಉಪದೇಶಾತ್ಮಕ ಕೀರ್ತನೆಗಳಲ್ಲಿ ಸ್ಪಷ್ಟವಾಗಿ ಗುರುತಿಸಬಹುದು:

ಸಾರಿದೂರಿ ಹೇಳುತೇನೆ ಕೆಟ್ಟ ಕಂಡ್ಯ ಬಡ್ಡಿಮನವೆ ಪ

ದೂರೊ ಬುದ್ಧಿ ಮಾಡಬೇಡ ಕೈಯ್ಯೊಳಿರೋ
ಕಡ್ಡಿ ನಿನ್ನ ಕೈಯ್ಯೊಳಿರೋ ಕಡ್ಡಿ ಅ.ಪ

ಎಂದು ತಮ್ಮ ಮನಸ್ಸಿಗೂ ಆ ಮೂಲಕ ಇತರರಿಗೂ ಕಡ್ಡಿ ಮುರಿದಂತೆ ಹೇಳಿಬಿಟ್ಟಿದ್ದಾರೆ. ಕೋಪ, ಮದ ಮತ್ಸರಾದಿಗಳನ್ನು ತೊರೆದು, ಪರರ ನಿಂದೆಯಿಲ್ಲಿ ಹೊತ್ತುಗಳೆಯದೆ ಆದಿಕೇಶವನ ಪಾದವನ್ನು ನಂಬಿ ಸುಖಿಯಾಗೆಂದು ಮಾರ್ಗದರ್ಶನ ಮಾಡುತ್ತಾರೆ. ಮನುಷ್ಯನ 'ಅಹಂ' ಅನ್ನು ಮಟ್ಟಹಾಕುತ್ತಾ,

ರೂಪದಲಿ ಮನ್ಮಥನೆ ಶಾಪದಲಿ ಗೌತಮನೆ
ಕೋಪದಲಿ ದೂರ್ವಾಸ ಮುನಿಯೆ ನೀನು
ತಪದಲಿ ವ್ಯಾಸನೆ ಕೃಪೆಯಲಿ ಬಲೀಂದ್ರನೆ
ನಿಪುಣತ್ವದಲಿ ನಾರದ ಮುನಿಯೆ ನೀನು ೧

..............................ನಡತೆಯಲಿ ಧರ್ಮಜನೆ
ದೃಢಮನಸಿನಲಿ ರುಕ್ಮಾಂಗದನೆ ನೀನು
ಪಡೆಯಲ್ಲಿ ಕೌರವನೆ ನುಡಿಯಲ್ಲಿ ಗಾಂಗೇಯನೆ
ಮಡದಿಯರ ಭೋಗಕ್ಕೆ ಸುರಪತಿಯೆ ನೀನು.....'

ಎಂದು ಮುಂತಾಗಿ ಅವನನ್ನು ಪ್ರಶ್ನಿಸುವ ಮೂಲಕ ಮನುಷ್ಯನ ಅಹಂಕಾರ ಸೋರಿಹೋಗುವಂತೆ ಮಾಡಿದ್ದಾರೆ. ತಾನೆಷ್ಟರವನು ಎನ್ನುವ ಅರಿವು ಅವನಿಗಾಗು

ವಂತೆ ಮಾಡಿದ್ದಾರೆ. ಕನಕದಾಸರ ಈ ತಂತ್ರ ತುಂಬ ಪರಿಣಾಮಕಾರಿಯಾಗಿದೆ. ಜೊತೆಗೆ ಇಲ್ಲಿ, ಇದಮಿತ್ಥಂ ಎಂದು ಪ್ರಸ್ತುತ ಪಾತ್ರಗಳ ಗುಣ, ಯೋಗ್ಯತೆಗಳನ್ನು ಅಳೆದಿಟ್ಟ ವಿಮರ್ಶಕರಾಗಿ ಕಾಣಿಸಿಕೊಂಡಿದ್ದಾರೆ ಕನಕದಾಸರು.

ದಾನ, ಧರ್ಮ, ಪರೋಪಕಾರಗಳನ್ನು ಮಾಡು; ಮೂಢರಸಹವಾಸವನ್ನು ಬಿಡು; ನೋಡದಿರು ಪರಸತಿಯ, ಆಡದಿರು ಮಾತುಗಳ ಗರ್ವದಿಂದ, ಶ್ರೀಹರಿಯ ಆಳಾಗಿ ನಯ ವಿನಯಗಳಿಂದ ಬದುಕು ಎಂಬುದು ಜನರಿಗೆ ಕನಕದಾಸರ ಉಪದೇಶ. ಇದರೊಂದಿಗಿರುವ 'ಹಾಳು ಸಂಸಾರಕ್ಕೆ ಹಲವರ ಬಾಯ್ಗಳ ಬಡಿಯದಿರೆಚ್ಚರಿಕೆ', 'ನಟನೆ ಬೇಡೆಚ್ಚರಿಕೆ' ಎನ್ನುವ ಮಾತುಗಳು ಗಮನಾರ್ಹ. (ಆದರೆ ನಾವು ಇಂದು ಮಾಡುತ್ತಿರುವುದು ಅದನ್ನೇ). ಈ ಮೌಲ್ಯಗಳೆಲ್ಲ ಒಂದೊಂದಾಗಿ ಕಳಚಿಕೊಳ್ಳುತ್ತಿರುವುದನ್ನು ಗಮನಿಸಿದ ದಾಸರು:

'ಸತ್ಯಧರ್ಮಗಳೆಲ್ಲ ಎತ್ತ ಪೋದವೊ ಕಾಣೆ
ಉತ್ತಮರ ಜೀವನಕೆ ದಾರಿಯಿಲ್ಲ
ನಿತ್ಯದಲಿ ಕಳವು ವ್ಯಭಿಚಾರವುಳ್ಳವರೆಲ್ಲರು
ಅರ್ಥ ಸಂಪನ್ನ ರಾಗ್ಯನುಭವಿಸುತಿಹರು'

ಎಂದು ಕೊರಗಿದ್ದಾರೆ. ಇಂದು ನಾವು ಈ ವಿಕೃತಿಗಳನ್ನು ಅವುಗಳ ಉಲ್ಬಣಾವಸ್ಥೆಯಲ್ಲಿ ಅನುಭವಿಸುತ್ತಿದ್ದೇವೆ. ನಾನೂರು ವರ್ಷಗಳ ಹಿಂದೆ ದಾಸರು ಅಲ್ಲಲ್ಲಿ ಕಂಡ ಇಂತಹ ಸಂಗತಿಗಳು ಈಗ ಕಾಲಧರ್ಮವೇ ಆಗಿಬಿಟ್ಟಿವೆ. ಘೋರ ನರಕದ ತನುವು ಎಂದು ಮನದಲಿ ತಿಳಿದು 'ಗೇರುಹಣ್ಣಿನ ಬೀಜದಂತೆ ಹೊರಗಿದ್ದು' 'ದಾಸನಾಗೋ ಭವ ಪಾಶನೀಗೋ ವಿಶೇಷ ನಾಗೋ' ಎಂಬುದೇ ಕನಕದಾಸರ ಉಪದೇಶದ ಸಾರ. ದಾಸರ ಕೀರ್ತನೆಗಳಲ್ಲಿ ಕಂಡುಬರುವ ಈ ವೈರಾಗ್ಯ ಪಲಾಯನವಾದವಲ್ಲ. ಅಥವಾ ಕೇವಲ ಆದರ್ಶದ ಮಾತುಗಳೂ ಅಲ್ಲ:

'ನೀರ ಮುಣುಗಲು ಯಾಕೆ ನಾರಿಯಳ ಬಿಡಲೇಕೆ
ವಾರಕೊಂದುಪವಾಸ ಮಾಡಲೇಕೆ
ನಾರಸಿಂಹನ ದಿವ್ಯ ನಾಮವನು ನೆನೆದರೆ
ಘೋರ ಪಾತಕವೆಲ್ಲ (ಹಾರಿ) ಹೋಗುವುದು'

ಎನ್ನುವ ನಿಲುವು ಕನಕದಾಸರದು. ಈ ಶರೀರದ ಕ್ಷಣಿಕತೆ, ಸಂಸಾರದ ನಿಸ್ಸಾರತೆಗಳ ಬಗ್ಗೆ ಇವರಷ್ಟು ತೀಕ್ಷ್ಣವಾಗಿ ಬೇರೆ ಯಾವ ಹರಿದಾಸರೂ ಹೇಳಿಲ್ಲವೆಂಬುದು ಸ್ಪಷ್ಟ

ಈ ಶರೀರ : 'ಎಲುವುಗಳ ಗಳಮಾಡಿ ಬಲುನರಂಗಳ ಬಿಗಿದು,
ಚೆಲುವ ತೊಗಲಂ ಪೊದಿಸಿ ಮಲಮಾಂಸವ ಮೆತ್ತಿ' ಮಾಡಿದ

ಹೊಲೆಗೂಡು: 'ಒಂದುಕ್ಷಣ ವಾಯುಬರೆ ದುರ್ಗಂಧ ಹೇಸುವುದು
ತಂದೆಯೊಡಲು ಮೂರು ಮಾಸ, ತಾಯುದರದಲ್ಲಿ
ನಿಂದು ನವಮಾಸಂಗಳಲ್ಲಿ
ಒಂದಾಗಿ ಮಲಮೂತ್ರದಲಿ ಕುದಿದು ಕುದಿದು
ಬಂದೆ ಎಂಭತ್ನಾಲ್ಕುಲಕ್ಷ ಯೋನಿಗಳಲ್ಲಿ'

ಬಂದದ್ದಾದರೂ ಎಲ್ಲಿ? ಹೊಟ್ಟೆಗೆ ಆಧಾರವೇನು? ಎಂದರೆ: ಬಂದದ್ದು ಬಚ್ಚಲಗುಣಿ ತಿಂದದ್ದು ಮೊಲೆಮಾಂಸ! ಸಾಯುವಾಗ 'ಪೊಂದಿಕೊಂಡು ಬರುವವಸ್ತು ಕೀರ್ತಿ ಅಪಕೀರ್ತಿ ಎರಡೆ', 'ಹುಟ್ಟುತೇನು ತರಲಿಲ್ಲ ಸಾಯುತೇನು ಒಯ್ಯಲಿಲ್ಲ'- ಇಂತಹ ಮಾತುಗಳನ್ನು ಕೇಳಿದಾಗ ಎಂತಹ ವಿಲಾಸಿಗಾದರೂ ಮನಸ್ಸು ಒಂದು ಕ್ಷಣ ವೈರಾಗ್ಯದತ್ತ ವಾಲುತ್ತದೆ. ಅಂದಬಳಿಕ ಸಾಮಾನ್ಯರ ಮನಸ್ಸಿನ ಮೇಲೆ ಇವು ಎಂತಹ ಪರಿಣಾಮಕಾರಿ ಅಸ್ತ್ರವಾಗಬಲ್ಲವು! ನಮ್ಮ ಸಂಸ್ಕೃತಿಯ ಸಾರವೇ ಇಂತಹ ಮಾತುಗಳಲ್ಲಿ ಅಡಕವಾಗಿದೆಯೇನೋ ಎನ್ನಿಸುತ್ತದೆ.

ಕನಕದಾಸರ ಕೀರ್ತನೆಗಳಲ್ಲಿ ಕಂಡುಬರುವ ತಾರ್ಕಿಕತೆ ಅತ್ಯದ್ಭುತವಾದುದು. 'ನೀನಾರಬಾಂಧವನೊ ನಿಖಿಳ ಯಾದವರೊಳಗೆ ಮಾನಾಭಿಮಾನ ವೆಳ್ಳನಿತಿಲ್ಲ ಕೃಷ್ಣ' ಎಂಬ ತಮ್ಮ ಒಂದು ಕೀರ್ತನೆಯಲ್ಲಿ ಕೃಷ್ಣನನ್ನು ತರಾಟೆಗೆ ತೆಗೆದುಕೊಂಡು ಅವನು ತನ್ನ ಭಕ್ತನಾದ ಭೀಷ್ಮನಿಗೆ ರಣರಂಗದಲ್ಲಿ ಶಿಖಂಡಿಯನ್ನು ತೋರಿಸಿ ಉಪಾಯದಿಂದ ಅವನನ್ನು ಶರಮಂಚದಲ್ಲಿ ಮಲಗಿಸಿದ್ದು; ಚಕ್ರವ್ಯೂಹ ರಚನೆಯಿಂದ ಅಭಿಮನ್ಯುವನ್ನು ಕೊಲ್ಲಿಸಿದ್ದು; ನರನ ಕೈಯಿಂದ ಸೈಂಧವನನ್ನು ವಧಿಸಿದ್ದು; ಧರ್ಮರಾಯನಿಂದ ಸುಳ್ಳು ಹೇಳಿಸಿ ದ್ರೋಣನನ್ನು ಕೊಲ್ಲಿಸಿದ್ದು, ಕರ್ಣನ ಸಾರಥಿ ಶಲ್ಯನನ್ನು ರಥದಿಂದ ಓಡಿಸಿದ್ದು; ಭೀಮನಿಂದ ಕೌರವನನ್ನು ಕೊಲ್ಲಿಸಿದ್ದು — ಇತ್ಯಾದಿ ಕೃಷ್ಣನ ಕುಟಿಲಜಾಲವನ್ನು ಬಯಲಿಗೆಳೆದು, ಮಾನಾಭಿಮಾನವಿಲ್ಲದವನೆಂದು ಅವನನ್ನು ಮೂದಲಿಸಿದ್ದಾರೆ. ಹಾಗೆಯೇ ಇನ್ನೊಂದು ಕೀರ್ತನೆಯಲ್ಲಿ :

'ಬಂದಿದೆ ಬರಿದೆ ಪಾಂಡವರಿಗೆ
ಕೊಂದವರಿವರು ಕೌರವರೆಂಬಪಕೀರ್ತಿ ಪ

ಮುನ್ನಿನ ವೈರದಿ ಕಡು ಸ್ನೇಹವ ಮಾಡಿ
ಉನ್ನಂತ ಲೆತ್ತ ಪಗಡೆಯಾಡಿಸಿ
ತನ್ನ ಕುಹಕದಿಂದ ಕುರುಬಲವನೆ ಕೊಂದ
ಘನ್ನಘಾತಕ ಶಕುನಿಯೋ ಪಾಂಡವರೊ ೧

ಮರಣ ತನ್ನಿಚ್ಛೆಯೊಳುಳ್ಳ ಗಂಗಾಸೂನು
ಧುರದೊಳು ಷಂಡನ ನೆಪದಿಂದಲಿ
ಸರಳ ಮಂಚದ ಮೇಲೆ ಮಲಗಿ ಮೊಮ್ಮಗನ
ಕೊರಳ ಕೊಯ್ದವನು ಭೀಷ್ಮನೋ ಪಾಂಡವರೊ ೨

ಎಂದು, ಕ್ರಮವಾಗಿ ಶಕುನಿ, ಭೀಷ್ಮ ಮಗನನೆವದಿಂದ ಕಾಳಗವನ್ನು ಬಿಸುಟ ದ್ರೋಣ, ತೊಟ್ಟಬಾಣವ ತೊಡಲೊಲ್ಲದೆ ನೆಟ್ಟನೆ ರಣದಲ್ಲಿ ತನ್ನ ಪ್ರಾಣವ ಬಿಟ್ಟುಕೊಂಡ ಕರ್ಣ, ರವಿಸುತನ ರಥದಿಂದಿಳಿದು ಹೋದ ಶಲ್ಯ, ಭೀಮನ ಮಾತಿಗೆ ಕೆರಳಿ ನೀರಿನಿಂದೆದ್ದು ಬಂದು ಕುಲವನ್ನೇಕೊಂದ ದುರ್ಯೋಧನ, ಹೀಗೆ ಈ ಎಲ್ಲರನ್ನೂ ಕೌರವರನ್ನು ಕೊಂದ ಕೊಲೆಗಾರರೆಂದು ಪಟ್ಟಿಮಾಡಿ, ಸಾಲಾಗಿನಿಲ್ಲಿಸಿ ಕೊನೆಗೆ :

ಕೌರವ ಪಾಂಡವರಿಗೆ ಭೇದ ಪುಟ್ಟಿಸಿ
ಕುರುಕ್ಷೇತ್ರದಿ ಫೌಜೊಡ್ಡಿ ಕಾದಿಸಿ
ಸಂಶಯವಿಲ್ಲದೆ ಕುರುಬಲವನೆ ಕೊಂದ
ಹಿಂಸಕನಾದಿಕೇಶವನೊ ಪಾಂಡವರೊ

ಎಂದು ಕೇಳುವ ಮೂಲಕ ಶ್ರೀಕೃಷ್ಣನನ್ನೇ ಕೊಲೆಗಾರನ ಸ್ಥಾನದಲ್ಲಿ ನಿಲ್ಲಿಸಿ, ಪಾಂಡವರು ನಿರಪರಾಧಿಗಳೆಂದು ಸಾಬೀತು ಮಾಡಿದ್ದಾರೆ. ಇಂತಹ ಕಡೆಗಳಲ್ಲಿ ಕನಕದಾಸರ ಸೂಕ್ಷ್ಮಗ್ರಾಹ್ಯಬುದ್ಧಿ, ಸಂಕಲನಾ ಚತುರತೆ, ಅಭಿವ್ಯಕ್ತಿಕೌಶಲಗಳು ಬೆರಗುಗೊಳಿಸುತ್ತವೆ. ಇಲ್ಲಿ ನ್ಯಾಯಾಸ್ಥಾನದಲ್ಲಿ ನಿಂತು ನಿರರ್ಗಳವಾಗಿ ವಾದಿಸಿದ ಉತ್ತಮ ನ್ಯಾಯವಾದಿಗಳಂತೆ ಕಂಡಿದ್ದಾರೆ, ಕನಕದಾಸರು.

ಕನಕದಾಸರು ಮೋಹನತರಂಗಿಣಿ, ನಳಚರಿತ್ರೆ, ರಾಮಧಾನ್ಯ ಚರಿತ್ರೆ ಮೊದಲಾದ ಕಾವ್ಯಗಳನ್ನು ರಚಿಸುವ ಮೂಲಕ ಹರಿದಾಸರಲ್ಲಿ ಕವಿಗಳೆನ್ನಿಸಿಕೊಂಡಿದ್ದಾರೆ. ಅವರ ಕೀರ್ತನೆಗಳಲ್ಲೂ ಅವರ ಕವಿ ಮನೋಭಾವ ಎದ್ದು ಕಾಣುತ್ತದೆ. ವ್ಯಕ್ತಿನಿಷ್ಠವಾದ ಕನಕದಾಸರ ಕೀರ್ತನೆಗಳು ಅವರ ಅಂತರಂಗದ ತುಮುಲ, ಭಕ್ತಿಯ ತೀವ್ರತೆಗಳ ಸರಳ ಸುಂದರ ಅಭಿವ್ಯಕ್ತಿಗಳಾಗಿವೆ. ಉದಾಹರಣೆಗೆ :-- ಅವರ ಅನುಭವಕ್ಕೆ ಬಂದಿರಬಹುದಾದ ಭೂಕಂಪವೊಂದನ್ನು ಮನದಲ್ಲಿಟ್ಟುಕೊಂಡು,

'ಏಕೆ ನಡುಗಿದೆ ತಾಯೆ ಭೂಮಿ ನಡುರಾತ್ರಿಯೊಳು ಪ

ಉತ್ತಮರ ಹೊಟ್ಟೆಯೊಳು ಬಗುಳೊ ಶ್ವಾನನು ಹುಟ್ಟಿ
ಹೆತ್ತವರ ನಿರ್ಬಂಧ ಕೊಳಗುಮಾಡಿ
ಅತ್ತೆ ಮಾವನ ಕೀರ್ತಿಯನು ಕೊಂಡಾಡದಧಮರ
ಹೊತ್ತು ಇರಲಾರೆನೆಂದು ನಡುಗಿದೆಯ ೧

ಮುರಹರನ ಸ್ಮರಣೆಯನು ಮಾಡದೆ ಕಲಿಯುಗದಿ
ಸಲೆ ಭಕ್ತಿಯಿಂ ಶಾಸ್ತ್ರವನೋದದೆ
ಲಲನೆಯರ ಮೇಲೆ ದೃಷ್ಟಿಯ ಬಿಡುವ ಹೊಲೆಯರನು
ಹೊರಲಾರೆನೆಂದು ನೀನೊಲಿದು ನಡುಗಿದೆಯ ೪

-ಎಂದು ಕೇಳುವ ಅವರ ರೀತಿ ಭೂಕಂಪಾನುಭವದೊಂದಿಗೆ ಒಂದು ಹೊಸ ಅರ್ಥ ಪರಂಪರೆಯನ್ನೇ ಬಿಚ್ಚಿಡುತ್ತದೆ. ಹಾಗೆಯೇ 'ತಲ್ಲಣಿಸದಿರು ಕಂಡ್ಯ ತಾಳುಮನವೆ', 'ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು', 'ಅಡಿಗೆಯನು ಮಾಡಬೇಕಣ್ಣನಾನೀಗ', 'ಮುತ್ತು ಬಂದಿದೆ ಕೇರಿಗೆ ಜನರು ಕೇಳಿ', 'ಯಾಕೆ ನೀನಿಲ್ಲಿ ಪವಡಿಸಿದೆ ಹರಿಯೆ', 'ತನು ನಿನ್ನದು ಜೀವನ ನಿನ್ನದು' ಮೊದಲಾದ ಕೀರ್ತನೆಗಳು ಪ್ರತ್ಯೇಕ ಭಾವ ಗೀತೆಗಳಾಗಿ ನಿಲ್ಲ ಬಲ್ಲವಾಗಿವೆ. ಕನಕದಾಸರ ಕೀರ್ತನೆಗಳಲ್ಲಿ ಹಾಸುಹೊಕ್ಕಾಗಿ ಬರುವ ಪ್ರಾಸಾನುಪ್ರಾಸಗಳು, ಉಪಮಾ, ರೂಪಕ, ನಿಂದಾಸ್ತುತಿಗಳು ಗಮನಾರ್ಹ. 'ಸೈಯವ್ವ ಇದು ಸೈಯ್ಯೆಗೋಪಿ', 'ಎಲ್ಲಾರುಮಾಡುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ' ಇತ್ಯಾದಿ ಶಬ್ದಾಲಂಕಾರಗಳನ್ನು ಗಮನಿಸಬಹುದು. ಸಂಸಾರದ ದುಃಖವನ್ನು, ಅಲ್ಲಿಯ ದುಸ್ಥಿತಿಯನ್ನು ಹೇಳಲು 'ನಾಯಿಬಾಯೊಳಗಿನ ಅರಿವೆಯಂತೆ' ಎಂಬ ಸಮರ್ಥ ಉಪಮೆಯನ್ನು ಬಳಸುತ್ತಾರೆ. ಈ ದೇಹವನ್ನು ಘೋರ ನರಕದ ತನುವೆಂದು ತಿಳಿದು 'ಗೇರುಹಣ್ಣಿನ ಬೀಜದಂತೆ' ವಿಷಯಗಳಿಂದ ಹೊರಗಿದ್ದು, ಆದಿಕೇಶವನನ್ನು ನೆನೆಯಬೇಕಂತೆ! ಸಂಸಾರದ ಅನಿತ್ಯತೆಯನ್ನು 'ಬೆಳ್ಳಿ ಬಂಗಾರಿಟ್ಟುಕೊಂಡು ಒಳ್ಳೆವಸ್ತ್ರಹೊದ್ದುಕೊಂಡು ಚಳ್ಳಂಪಿಳ್ಳಿ ಬೊಂಬೆಯಂತೆ ಆಡಿಹೋಯಿತು' ಎನ್ನುವರು. 'ತಲೆ ಹುಳುಕನಾಯಂತೆ' ಮನೆಮನೆ ತಿರುಗಿದೆ' ಎಂದು ತಮ್ಮ ಸ್ಥಿತಿಯನ್ನು ಹರಿಗೆ ನಿವೇದಿಸಿಕೊಳ್ಳುತ್ತಾರೆ. ಈ ಒಂದೊಂದೂ ಮಾತಿನ ಹಿಂದಿರುವ ದಾಸರ ಅನುಭವದ ಆಳ ಅಪಾರ. ಇಡೀ ಮಹಾಭಾರತ ಯುದ್ಧವೇ ಒಂದು ಬೊಂಬೆಯಾಟವಾಗಿ ಕಂಡಿದೆ, ಕನಕದಾಸರಿಗೆ.

'ಬೊಂಬೆಯಾಟವನಾಡಿಸಿದೆ ಮಹಾಭಾರತದ
ಅಂಬುಜಭವಾದಿ ಅಮರರು ನೋಡುತಿರಲು'

ಎಂಬ ಈ ಕೀರ್ತನೆ ದಾಸರ ಸಮಗ್ರರೂಪಕಕ್ಕೆ ಒಂದು ಒಳ್ಳೆಯ ಉದಾಹರಣೆ. ಅಂತೆಯೇ ತಮ್ಮ ಮನದ ಮಾಲಿನ್ಯವನ್ನು ಕಳೆದುಕೊಳ್ಳುವ ಆತುರ, ಅವರ 'ನನ್ನವ್ವ ಕಲ್ಲಬಿಡೆ ಈ ಧೋತ್ರವ ಚೆನ್ನಾಗಿ ಒಗೆಯಬೇಕು' ಎನ್ನುವ ರೂಪಕದಲ್ಲಿ ಕಂಡುಬರುತ್ತದೆ. ಕನಕದಾಸರು ಕಟ್ಟಿಕೊಡುವ ಇಂತಹ ಒಂದೊಂದು ಶಬ್ದ ಚಿತ್ರದ ವೈಖರಿಯೂ ಕಣ್ಣಿಗೆ ಕಟ್ಟುವಂತಹುದು; ಮನಸ್ಸಿಗೆ ತಟ್ಟುವಂತಹುದು. ತಮ್ಮ ಬೃಹತ್ ಕಲ್ಪನೆಗಳನ್ನೂ ನೇರವಾಗಿ ಜನ ಸಾಮಾನ್ಯರಿಗೆ ಮುಟ್ಟಿಸಬಲ್ಲ ಶಕ್ತರು ಕನಕದಾಸರು. ಉದಾ:--

'ಹಲವು ಜನುಮದಿ ತಾಯಿ ಎನಗಿತ್ತ ಮೊಲೆಹಾಲು
ನಲಿನಲಿದು ಉಂಬಾಗ ನೆಲಕೆ ಬಿದ್ದುದು ಕೂಡಿ
ಅಳೆಯೆ ಕ್ಷೀರಾಂಬುಧಿಗಿಮ್ಮಿಗಿಲು
ಹಲವು ಬಗೆಯಲಿ ಅಳುವ ಅಶ್ರುಜಲವನುಕೂಡಿ
ಅಳೆದು ನೋಡಿದರೆ ಲವಣಾರ್ಣವಕೆ ಮೂರುಮಡಿ
ಎಲುವುಗಳ ಕೂಡಿದರೆ ಮೇರುವಿಗೆ ನಾಲ್ಕುಮಡಿ
ಸುಲಿದು ಚರ್ಮವ ಹಾಸಿದರೆ ಧರೆಗೆ ಐದುಮಡಿ
ನೆಲೆಯಾವುದೀ ದೇಹಕೆ'

ಇಂತಹ ಹಲವಾರು ಪ್ರತಿಮೆಗಳು ಕನಕದಾಸರ ಕೀರ್ತನೆಗಳಲ್ಲಿದ್ದು ಓದುಗರನ್ನು ಮೂಕರನ್ನಾಗಿಸುತ್ತವೆ.

ಕನಕದಾಸರು ತಿರುಪತಿ, ಉಡುಪಿ, ಬೇಲೂರು, ಮೇಲುಕೋಟೆ, ಶ್ರೀರಂಗಪಟ್ಟಣ, ಮಳೂರು, ಮುಳಬಾಗಿಲು, ವಿಜಯನಗರ, ಕದರ ಮಂಡಲಗಿ ಇತ್ಯಾದಿ ಕ್ಷೇತ್ರಗಳನ್ನು ಸಂದರ್ಶಿಸಿ, ಕ್ಷೇತ್ರ ಮೂರ್ತಿಗಳನ್ನು ಸ್ತುತಿಸಿರುವುದು ಅವರ ಕೀರ್ತನೆಗಳಿಂದ ತಿಳಿದುಬರುತ್ತದೆ. ತಿರುಪತಿಯ ತಿಮ್ಮಪ್ಪನನ್ನು 'ಕಡುಲೋಭಿಸೆಟ್ಟಿ' ಎಂದು ಅಪಹಾಸ್ಯಮಾಡಿ ನಕ್ಕದಾಸರು ಉಡುಪಿಯ ಕೃಷ್ಣನನ್ನು ಕುರಿತು 'ಕಾರುಣ್ಯನಿಧಿ ಎನ್ನಕಾಯಬೇಕಯ್ಯ...... ಮುದ್ದು ಉಡುಪಿಯ ಕೃಷ್ಣ' ಎಂದು ಅವನನ್ನು ಮೊರೆಹೊಕ್ಕಿರುವರು. ಬೇಲೂರಿನ ಚೆನ್ನಕೇಶವನಿಗೆ ನಮಸ್ಕರಿಸಿ, 'ಪಾಪಾತ್ಮನಾನಲ್ಲ ಪಾಪವೆನಗಿನಿತಿಲ್ಲ' ಎಂದು ತಮ್ಮನ್ನು ಒಪ್ಪಿಸಿಕೊಳ್ಳುತ್ತ ತಮ್ಮ ತಪ್ಪುಗಳಿಗೆಲ್ಲ ಅವನನ್ನೇ ಹೊಣೆಗಾರನನ್ನಾಗಿ ಮಾಡಿದ್ದಾರೆ. ಕನಕದಾಸರು ತಮ್ಮ 'ಹರಿಭಕ್ತಿಸಾರ'ವನ್ನು ಬೇಲೂರಿನಲ್ಲೇ ರಚಿಸಿದರೆಂಬ ಮಾತಿದೆ. (ಕಭವಿ. ಪು. 200) 'ಯಾದವಗಿರಿ ವಾಸನಹುದೋ ಶ್ರೀ ನಾರಸಿಂಹ' ಎಂದು ಮೇಲುಕೋಟೆಯ ಚೆಲುವನಾರಾಯಣನನ್ನು ಸ್ತುತಿಸಿ ಅವನ ದಶಾವತಾರಗಳ ವೈಭವವನ್ನು ಚಿತ್ರಿಸಿದ್ದಾರೆ. ಶ್ರೀರಂಗಪಟ್ಟಣದ ರಂಗನಾಥನನ್ನು ಕುರಿತು--

ಯಾಕೆ ನೀನಿಲ್ಲಿ ಪವಡಿಸಿದೆ ಹರಿಯೇ ಜಗ-
ದೇಕ ವಿಖ್ಯಾತ ಪಶ್ಚಿಮ ರಂಗನಾಥ ಪ

ತಮನೊಡನೆ ಹೋರಿ ಬೆಟ್ಟವನು ಬೆನ್ನಿಲಿ ಪೊತ್ತು
ರಮಣಿ ಭೂಮಿಯನು ತಂದಾಯಾಸವೊ
ಅಮರ ವೈರಿಯ ಕರುಳಕಿತ್ತ ಕಡುಧಾವತಿಯೊ
ಕ್ಷಮೆಯನಳೆದೀ ಪಾದಕಮಲ ನೊಂದವೊ ೧

ಪೊಡವಿಪಾಲಕರ ವಂಶವನು ಒಬ್ಬನೆ ಕಡಿದು
ಕೊಡಲಿಯನು ಬಿಸುಟು ಮಲಗಿದ ಭಾವವೊ
ಮಡದಿಯನು ಕದ್ದೊಯ್ದವನ ಶಿರವನೆ ತರಿದು
ಒಡಲಿನಾಯಾಸದಲಿ ಪವಡಿಸಿದ ಪರಿಯೊ' ೨

ಎಂದು ಮುಂತಾಗಿ ಹರಿಯ ದಶಾವತಾರಗಳನ್ನು ಕಲ್ಪಿಸಿಕೊಳ್ಳುತ್ತಾ,

ಇನ್ನೆಷ್ಟುಕಾಲ ನೀನಿಲ್ಲಿ ಮಲಗಿದ್ದರೂ
ನಿನ್ನ ನೆಬ್ಬಿಸುವರೊಬ್ಬರನು ಕಾಣೆ
ಉನ್ನಂತ ಕಾಗಿನೆಲೆಯಾದಿ ಕೇಶವರಾಯ
ಚೆನ್ನ ಶ್ರೀರಂಗಪಟ್ಟಣದ ರಂಗಧಾಮ'

ಎಂದು ಮಾರ್ಮಿಕವಾಗಿ ನುಡಿಯುತ್ತಾರೆ! ಕನಕದಾಸರ ಕವಿಪ್ರತಿಭೆ ಇಲ್ಲಿ ವಿಷಾದಪೂರ್ಣಧ್ವನಿಯಾಗಿ ಕೆಲಸ ಮಾಡಿದೆ. ಇವೆಲ್ಲಕ್ಕಿಂತ ಹೆಚ್ಚಾಗಿ ಕನಕದಾಸರು ಮಾನವೀಯತೆಯುಳ್ಳವರು, ಹೃದಯವಂತಿಕೆಯುಳ್ಳವರು. ಸಮಾಜದ ಎಲ್ಲಸ್ತರದ ಜೀವನಕ್ಕೂ ಪ್ರತಿಕ್ರಿಯಿಸಬಲ್ಲವರು. ಸಮಾಜದ ಬಗ್ಗೆ ಅವರ ಚಿಕಿತ್ಸಕ ದೃಷ್ಟಿ, ಕಳಕಳಿಗಳು ಅವರನ್ನು ಒಬ್ಬ ಉತ್ತಮ ಮನುಷ್ಯನನ್ನಾಗಿ, ಲೋಕಾನುಭವಿಯನ್ನಾಗಿ ಮಾಡಿವೆ. ಅವರ ಲೋಕಾನುಭವಗಳು ಗಾದೆಮಾತುಗಳಾಗಿಯೇ ಹೊರಹೊಮ್ಮಿವೆ :

'ಬಾಯಿನಾರಿದಮೇಲೆ ಏಕಾಂತವೆ?
ತಾಯಿ ತೀರಿದ ಮೇಲೆ ತೌರಾಸೆಯೆ?'
'ಚಳಿಜ್ವರಕೆ ಚಂದನದ ಲೇಪ ಹಿತವೆ?'
'ದಂತಿಯಿಲ್ಲದ ಅರಸು ಮುರಿದ ಕಾಲಿನಗೊರಸು'
'ಸೊಕ್ಕಿನಡೆಯುವ ಭೃತ್ಯ ಅಪಕ್ರೂರಕೃತ್ಯ'
'ಉಂಡುನಗದಿಹ ಮೋರೆ ಅದು ಕಹಿಯ ಸೋರೆ'

-ಹೀಗೆ ಉದ್ದಕ್ಕೆ ಪಟ್ಟಿಯನ್ನು ಬೆಳೆಸುತ್ತಾ ಹೋಗಬಹುದು. 'ಹಾವು ಹಿಡಿಯಲು ಬಹುದು ಹರಣ ಕೊಡಲಿಬಹುದು ' 'ದೇವಕಿಚ್ಚನ್ನು' ಬೇಕಾದರೂ 'ಹಿಡಿಮನುಂಗ ಬಹುದು'. ಆದರೆ ಹೆಣ್ಣುಕೊಟ್ಟ ಮಾವನ ಮನೆಯಲ್ಲಿ ಮಾತ್ರ ಇರಬಾರದು. ಇದು ಅಳಿಯಂದಿರಿಗೆ ಕನಕ ದಾಸರ ಕಿವಿಮಾತು. ಉಂಡಮನೆಗೆ ಎರಡೆಣಿಸುವಾತನ ಸಂಗ, ಕೊಂಡೆಯವ ಪೇಳಿ ಕಾದಿಸುವನ ಸಂಗ; ತಂದೆ ತಾಯಿಗಳನು ಬೈದು ಜರಿದು ಬಾಧಿಸುವನಸಂಗ ಅವರಿಗೆ ಭಯವನ್ನುಂಟುಮಾಡಿದೆ. ಅಂತಹವರ ಸಂಗ ತಮಗೆ ಎಂದೆಂದಿಗೂ ಬೇಡ ಹರಿಯೆ ಎನ್ನುತ್ತಾರೆ. ಅವರ 'ಎಲ್ಲಾರು ಮಾಡುವುದು ಹೊಟ್ಟೆಗಾಗಿ

ಗೇಣು ಬಟ್ಟೆಗಾಗಿ ತುತ್ತು ಹಿಟ್ಟಿಗಾಗಿ' ಎಂಬ ಮಾತುಗಳಂತೂ ಎಲ್ಲ ಮತಧರ್ಮದವರನ್ನು, ಮನುಷ್ಯಮಾತ್ರದವರನ್ನು ಪ್ರತಿನಿಧಿಸುವಂತಹವು. ಇಡೀಕೀರ್ತನೆ ಹೊಟ್ಟೆ ಬಟ್ಟೆಗಳಿಗಾಗಿ ವೇಷಕಟ್ಟುವ ವಿವಿಧವರ್ಗದವರನ್ನು ಕುರಿತ ವಿಡಂಬನೆ ಹಾಗೂ ವಸ್ತುಸ್ಥಿತಿ. ಕಳ್ಳರು, ಸುಳ್ಳರು, ವೇಶ್ಯೆಯರು, ಕಪಟಸನ್ಯಾಸಿಗಳು, ಮಠಾಧಿಪತಿಗಳು, ಮೊಂಡ ಬೈರಾಗಿಗಳು ಈ ಎಲ್ಲ ವೇಷಗಳೂ ಕೇವಲ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ. ಇವರೊಟ್ಟಿಗೆ ಕಟ್ಟಿಗೆ ಹೊರೆಹೊತ್ತು ಕಷ್ಟಪಟ್ಟು ಕೂಲಿಮಾಡಿ ಹೊಟ್ಟೆ ಹೊರೆಯುವ ಜನ, ಕೃಷಿಕರು, ಸೈನಿಕರು, ಶಾಸ್ತ್ರಹೇಳುವವವರು ಎಲ್ಲರೂ ಸೇರಿದ್ದಾರೆ. ಒಟ್ಟಿನಲ್ಲಿ ಮಾನವ ಸಂಸಾರದ ಬವಣೆಯೆಲ್ಲ ಹೊಟ್ಟೆಗಾಗಿ ಗೇಣುಬಟ್ಟೆಗಾಗಿ ಎನ್ನುವ ವಾಸ್ತವಸತ್ಯವನ್ನು ಶಕ್ತಿಯುತವಾಗಿ ಮಂಡಿಸಿದ್ದಾರೆ.

ಕನಕದಾಸರಿಗೆ ತಮ್ಮ ಸುತ್ತಣ ಜನಜೀವನದ ಬಗ್ಗೆ ಇರುವಂತೆಯೇ ತಮ್ಮ ಜನದ ಭಾಷೆಯ ಬಗ್ಗೆಯೂ ಎಚ್ಚರವಿರುವುದು ಮೆಚ್ಚಬೇಕಾದ ಸಂಗತಿ. ಡೋಲಿನ ಗತಿಗೆ ಹೊಂದಿಕೆಯಾಗುವಂತೆ 'ದೇವಿ ನಮ್ಮ ದ್ಯಾವರು ಬಂದರು ಬನ್ನಿರೆ ನೋಡಬನ್ನಿರೆ' ಎಂದು ಹಾಡುತ್ತಾ, ಜಾನಪದ ಧಾಟಿಯಲ್ಲಿ ಹರಿಯ ದಶಾವತಾರಗಳನ್ನು ಹಾಡಿರುವರು :

"ಕೆಂಗಣ್ಣ ಮೀನನಾಗಿ ನಮರಂಗ
ಗುಂಗಾಡಿ ಸೋಮನ ಕೊಂದಾನ್ಮಾ
ಗುಂಗಾಡಿ ಸೋಮನ ಕೊಂದು ವೇದವ
ಬಂಗಾರದೊಡಲನಿಗಿತ್ತಾನ್ಮಾ" ೧

—ಈ ಸ್ವರೂಪದಲ್ಲಿ ಕೃತಿ ಹನ್ನೊಂದು ನುಡಿಗಳಲ್ಲಿ ಮುಂದುವರಿಯುತ್ತದೆ. 'ಭರ್ಮಗರ್ಭ' ಇಲ್ಲಿ 'ಬಂಗಾರದೊಡಲ'ನಾಗಿದ್ದಾನೆ. ಅಂತೆಯೇ ಅವರಲ್ಲಿ 'ಹಿರಣ್ಯಾಕ್ಷ' 'ಚಿನ್ನಗಣ್ಣಿನವ'ನಾಗಿರುವುದೂ ಗಮನಾರ್ಹ. ಕನಕದಾಸರ ಭಾಷೆ ಎಲ್ಲಿಯೂ 'ಪೆಡಸಾಗಿಲ್ಲ'. ಸಹಜತೆ, ಸರಳತೆಗಳೇ ಅದರ ಪ್ರಧಾನಗುಣವಲ್ಲದೆ ಅದು ಕಾವ್ಯಗುಣವೂ ಆಗಿ ಪರಿಣಮಿಸಿದೆ.

ಗೇಯಾತ್ಮಕ ಕೃತಿಗಳನ್ನು ರಚಿಸುವ ಮೂಲಕ ಇತರ ಹರಿದಾಸರುಗಳಂತೆ ಕನಕದಾಸರೂ ವಾಗ್ಗೇಯಕಾರರೆನ್ನಿಸಿಕೊಂಡಿದ್ದಾರೆ. ಆದರೆ ಇತರ ಹರಿದಾಸರುಗಳಂತೆ ಇವರಲ್ಲಿ ತಾಳಪ್ರಧಾನ ರಚನೆಗಳಾದ ಸುಳಾದಿಗಳಾಗಲೀ, ರಾಗಪ್ರಧಾನ ರಚನೆಗಳಾದ ಉಗಾಭೋಗಗಳಾಗಲೀ ಇದ್ದಂತಿಲ್ಲ. ಬಹುಶಃ ಅವರು ಕಾವ್ಯಗಳನ್ನು ರಚಿಸಿರುವುದು ಇದಕ್ಕೆ ಕಾರಣವಿರಬಹುದು. (ಮುಂದೆ 'ಶ್ರೀ ಹರಿಕಥಾಮೃತಸಾರ'ವನ್ನು ರಚಿಸಿದ ಶ್ರೀ ಜಗನ್ನಾಥದಾಸರಲ್ಲೂ ಸುಳಾದಿ, ಉಗಾಭೋಗಗಳ ಸಂಖ್ಯೆ ತೀರಕಡಿಮೆ (ಮೂರು ಸುಳಾದಿಗಳು, ಒಂದು ಉಗಾಭೋಗ ಸಿಕ್ಕಿದೆ.) ಎಂಬುದನ್ನು ಗಮನಿಸಬಹುದು.)

ಕನಕದಾಸರ ಕೀರ್ತನೆಗಳನ್ನು ಒಟ್ಟಾಗಿ ಪರಿಭಾವಿಸಿ ಹೇಳುವುದಾದರೆ, ಜೀವನವನ್ನು ಕಂಡಿರುವ ಪುರಂದರದಾಸರ ಸಮಗ್ರದೃಷ್ಟಿ, ಅವರ ಸೌಮ್ಯಮನೋಭಾವ, ಆತ್ಮೀಯತೆಗಳು ಕನಕದಾಸರಲ್ಲಿ ಆ ಮಟ್ಟದಲ್ಲಿ ಕಾಣುವುದಿಲ್ಲವಾದರೂ ತಮಗೆ ಅನ್ನಿಸಿದಂತೆ ಹೇಳುವ ಕನಕದಾಸರ ಕೆಚ್ಚು, ಅನ್ಯಾಯವನ್ನು ಪ್ರತಿಭಟಿಸುವ ಅವರ ಧೈರ್ಯ, ಭಗವದ್ಭಕ್ತಿಯ ಔನ್ನತ್ಯ, ಅವರು ಅರಿತು ಸಾರಿರುವ ವೈರಾಗ್ಯದ ನಿಜವಾದ ಅರ್ಥ, ಮಾನವನಸ್ವಭಾವಗಳ ಆಳವಾದ ಅವರಗ್ರಹಿಕೆ, ಮನುಷ್ಯನ ಸಣ್ಣಬುದ್ಧಿಗಳನ್ನು ಕಂಡಾಗಿನ ಅವರ ನೋವು, ಅಂತಹವರನ್ನು ತಿದ್ದುವತ್ತ ಅವರ ಕಳಕಳಿ, ಇವೆಲ್ಲವುಗಳನ್ನೂ ಹಿಂಜಿ ಹಿಂಜಿ, ಮತ್ತೆ ಮತ್ತೆ ಹೇಳಿ ಜನಸಾಮಾನ್ಯರಿಗೆ ಮನದಟ್ಟುಮಾಡಿಕೊಡುವ ರೀತಿ ಕನಕದಾಸರಿಗೇ ವಿಶಿಷ್ಟವಾದುದು. ಈ ದೃಷ್ಟಿಯಿಂದ ಅವರು ಹರಿದಾಸರಲ್ಲಿ ಅದ್ವಿತೀಯರು. ಜಾತಿ -- ಕುಲಗಳ ವಿಚಾರದಲ್ಲಿ ಬಹಳ ಉದಾತ್ತ ಮನೋಭಾವವನ್ನು ವ್ಯಕ್ತಪಡಿಸಿರುವ ಕನಕದಾಸರು ಅಬ್ರಾಹ್ಮಣರಾಗಿ ಹುಟ್ಟಿದ್ದರಿಂದ ಅವರ ಸಾಮಾಜಿಕ ಸ್ಥಾನಮಾನಗಳು ಹೇಗಿದ್ದಿರಬಹುದೆಂಬುದಕ್ಕೆ ಉಡುಪಿಯಲ್ಲಿರುವ 'ಕನಕನಕಿಂಡಿ'ಯ ಐತಿಹ್ಯ ಜೀವಂತ ಸಾಕ್ಷಿಯಾಗಿದೆ. ದಾಸರ ಹೆಸರಿನಲ್ಲಿ ಇಂದಿಗೂ ನಮ್ಮಲ್ಲಿ ಪ್ರಚಲಿತ ವಿರುವ 'ಬಾಳೆಹಣ್ಣಿನ ಕತೆ', 'ದೇವರನ್ನು ತೋರಿಸಿದ್ದು', 'ಕೋಣಮಂತ್ರದ ಸಿದ್ಧಿ' --ಇತ್ಯಾದಿ ಪವಾಡಗಳ ಒಂದು ಮುಖ ದಾಸರ ಸತ್ವ, ಶಕ್ತಿ, ಶ್ರದ್ಧೆಗಳ ಪ್ರತೀಕವಾದರೆ ಇನ್ನೊಂದು ಮುಖ ಕುಹಕಿಗಳು ಅವರಿಗೆ ಕೊಡುತ್ತಿದ್ದ ನಾನಾರೀತಿಯ ಕಿರುಕುಳಗಳನ್ನೂ, ವ್ಯಾಸರಾಯರಂತಹವರು ಕನಕನನ್ನು ಅವರಿಗೆ ಪರಿಚಯಿಸುತ್ತಿದ್ದ ರೀತಿಯನ್ನೂ ತಿಳಿಸುತ್ತವೆ. ರಾಜಕಾರಣದಲ್ಲಿ ಪ್ರಮುಖ ವ್ಯಕ್ತಿಗಳೂ, ಪರಮಭಕ್ತರೂ, ಕವಿಗಳೂ, ಶಾಸ್ತ್ರವೇತ್ತರೂ, ಜ್ಞಾನಿಗಳೂ ಆಗಿದ್ದಂತಹ ಕನಕದಾಸರದೇ ಈ ಪರಿಸ್ಥಿತಿಯಾದರೆ ಇನ್ನು ಸಾಮಾನ್ಯರ ಬಗ್ಗೆ ಕುಲದ ಕಟ್ಟು ಕಟ್ಟಲೆಗಳು ಹೇಗಿದ್ದಿರಬಹುದು? ಜನ ಅವರನ್ನು ನಡೆಸಿಕೊಂಡಿರಬಹುದಾದ ರೀತಿಗೆ ದಾಸರ ಚುರುಕುಮೆಣಸಿನಕಾಯಿಯಂತಿರುವ ಕೀರ್ತನೆಗಳೇ ಉತ್ತರವನ್ನು ಕೊಡಬಲ್ಲವು.

* * * * *

# ಕನಕದಾಸರ ಕೃತಿಗಳಲ್ಲಿ ಗೇಯತೆ

ಎಂ. ರಾಜಗೋಪಾಲಾಚಾರ್ಯ

ಪೂರ್ಣಪ್ರಜ್ಞ ಕಾಲೇಜು, ಉಡುಪಿ.

ಪ್ರಾಚೀನ ಕಾಲದ ಭಾರತದಲ್ಲಿ ಯಾವ ರೀತಿಯ ಗಾನ ಪದ್ಧತಿಯಿದ್ದಿತು ಎಂಬು ದನ್ನು ನಾವೀಗ ಖಚಿತವಾಗಿ ಹೇಳಲಾರೆವು. ಪ್ರಪಂಚದಲ್ಲೇ ಪ್ರಾಚೀನ ತಮ ಸಾಹಿತ್ಯ ಎಂದರೆ ವೇದಗಳು. ಆ ವೇದಗಳಲ್ಲಿ ಸಪ್ತಸ್ವರಗಳ ಕಲ್ಪನೆಯಿದ್ದಿತೆಂಬುದು ತಿಳಿಯುತ್ತದೆ. ಗೀತೆಯಲ್ಲಿ ಕೃಷ್ಣ ಗಾನಾತ್ಮಕವಾದ ಸಾಮವೇದವೇ ತಾನು ಎಂದು (ವೇದಾನಾಂ ಸಾಮ ವೇದೋಽಸ್ಮಿ) ಹೇಳಿದ. ಇಂದಿಗೂ ಸಾಮವೇದವನ್ನು ಒಂದು ಸ್ಥಾಯಿಯನ್ನು ಆವರಿ ಸುವ ಸಪ್ತಸ್ವರಗಳಲ್ಲೇ ಹಾಡುತ್ತಾರೆ ಹೊರತು, ಮಂತ್ರದಂತೆ ಹೇಳುವುದಿಲ್ಲ. ಋಗ್ವೇದ, ಯಜುರ್ವೇದಗಳಲ್ಲಿ ಸಪ್ತಸ್ವರಗಳು ಇದ್ದರೂ ಅವು ಒಂದು ಸ್ಥಾಯಿಯನ್ನು ವ್ಯಾಪಿಸು ವಂತೆ ಇರುವುದಿಲ್ಲ. ಸಾಮದಲ್ಲಿ ಮಾತ್ರ ಮಧ್ಯಮದಿಂದ ಮಧ್ಯಮದವರೆಗೆ ಒಂದು ಸ್ಥಾಯಿಯನ್ನೇ ಮಾಡುವ ಏಳು ಸ್ವರಗಳು ಇವೆ. ವೈದಿಕ ಗಾನವೇ ಶ್ರೇಷ್ಠವೆಂಬ ಭಾವ ನೆಯು ಪ್ರಾಚೀನರಿಗಿತ್ತು. ಅದೇಕಾಲದಲ್ಲಿ ಇನ್ನೊಂದು ರೀತಿಯ 'ಲೌಕಿಕ ಗಾನ' ಎಂಬ ಪ್ರಕಾರವೂ ಇದ್ದಿತೆಂದು ಕಾಣುತ್ತದೆ. ಮತ್ತು ಇದು ಹೆಚ್ಚು ಜನಪ್ರಿಯವಾಗಿತ್ತು. ಆದರೆ ಲೌಕಿಕ ಗಾನವು ವೈದಿಕ ಗಾನದಷ್ಟು ಪವಿತ್ರವಲ್ಲ -- ಜನಪ್ರಿಯವಾಗಿದ್ದರೂ -- ಎಂಬ ಪರಿಕಲ್ಪನೆಯೂ ಇದ್ದಿತು.

ವ್ಯಾಖ್ಯಾಗಾನೇಷ್ವ ಶಕ್ತಸ್ತು ಶಿವಮುದ್ದಿಶ್ಯ ಬುದ್ಧಿಮಾನ್
ಲೌಕಿಕೀಮಪಿ ವಾ ಗೀತಿಂ ಕುರ್ಯಾನ್ನಿತ್ಯಮತಂದ್ರಿತಃ

ವೈದಿಕಗಾನವನ್ನು ಹಾಡಲು ಅಸಮರ್ಥರಾದವರು ಅಥವಾ ಅನಧಿಕಾರಿಗಳು ಲೌಕಿಕಗಾನದಿಂದಲಾದರೂ ಶಿವನನ್ನು ಆರಾಧಿಸಬಹುದು ಎಂಬ ಭಾವನೆಯೂ ಇದ್ದಿತು. ಕ್ರಮೇಣ ಈ ಲೌಕಿಕಗಾನವೇ ಸಮಾಜದಲ್ಲಿ ಒಳ್ಳೆಯ ಸ್ಥಾನವನ್ನು ಪಡೆ ಯಿತು. ಲೌಕಿಕಗಾನದಲ್ಲಿ ದೇವರನ್ನು ಹಾಡಿ, ಹೊಗಳುವ ಭಕ್ತಿಗೀತಗಳೇ ತುಂಬಿದ್ದು, ವೈದಿಕ ವಿದ್ವಾಂಸರೂ ಇದನ್ನು ಹೆಚ್ಚಾಗಿ ರೂಢಿಗೆ ತಂದರು. ವೈದಿಕ ಗಾನದ ಬಳಿಕ ಲೌಕಿ ಕಗಾನದ ಸ್ಥಾನವೂ, ಪಾವಿತ್ರ್ಯವೂ ಏರುತ್ತಲೇ ಹೋಯಿತು. ಶತಮಾನಗಳಿಂದಲೂ ಈ ಲೌಕಿಕಗಾನವು ಭಾರತೀಯ ಸಂಗೀತ ಪದ್ಧತಿಯನ್ನು ರೂಪಿಸುತ್ತಲೇ ಬಂದಿದೆಯಲ್ಲದೆ ಜನರ ಆಸಕ್ತಿಯನ್ನು ತನ್ನೆಡೆಗೆ ಸೆಳೆಯುತ್ತಲೇ ಬಂದಿದೆ. ಲೌಕಿಕ ಗಾನದಿಂದ ಒಬ್ಬ ತನ್ನ ಮನಸ್ಸನ್ನು ಏಕಾಗ್ರಗೊಳಿಸಿ, ಆತ್ಮಾನಂದವನ್ನು ಪಡೆಯಬಲ್ಲ. ದೇವರನ್ನು ಒಲಿಸಲು ಇದು ಸುಲಭವಾದ ಮಾರ್ಗ ಎಂಬ ತತ್ತ್ವ ಅನುಭವದಿಂದ ತಿಳಿಯಿತು. ಇದಕ್ಕೆ ಕೀರ್ತನ ಎಂಬ ಹೆಸರು ಬಂದಿತು. ಕೀರ್ತನ ಪದ್ಧತಿಯು ಭಾರತದ ಬೇರೆ ಬೇರೆ ಕಡೆಗಳಲ್ಲಿ ವಿಭಿನ್ನ

ವಾಗಿದೆ. ದಕ್ಷಿಣ ಭಾರತದಲ್ಲಿ ಇದು ಭಾಗವತ ಸಂಪ್ರದಾಯ ಎಂದು ವಿಕಾಸವಾಗುತ್ತಾ ಬಂದು ವಿಖ್ಯಾತವಾಗಿದೆ. ಈ ಸಂಪ್ರದಾಯದಲ್ಲಿ ಭಾರತೀಯ ಸಂಗೀತದ ಹಳೆಯ ಶೈಲಿಯೊಡನೆ ಜಾನಪದ - ಔತ್ತರೇಯ ಪದ್ಧತಿಗಳು ಹದವಾಗಿ ಮಿಲನಗೊಂಡುದನ್ನು ಕಾಣಬಹುದು. ಆದುದರಿಂದ ಮೊದಲಿನಿಂದಲೂ ಈ ಕೀರ್ತನ ಪದ್ಧತಿಯು ಪಂಡಿತರನ್ನೂ ಪಾಮರರನ್ನೂ ಏಕರೀತಿಯಾಗಿ ಆಕರ್ಷಿಸುತ್ತಿತ್ತು. ಭಾಗವತ ಸಂಪ್ರದಾಯದ ಕೀರ್ತನೆಗೆ ಸಂಕೀರ್ತನೆ ಎಂಬ ಹೆಸರೂ ಇದೆ. ಕೀರ್ತನ ಎಂಬುದು ನವವಿಧ ಭಕ್ತಿಗಳಲ್ಲಿ ಒಂದು.

ಶ್ರವಣಂ, ಕೀರ್ತನಂ, ವಿಷ್ಣೋಃ ಸ್ಮರಣಂ, ಪಾದ ಸೇವನಂ
ಅರ್ಚನಂ, ವಂದನಂ, ದಾಸ್ಯಂ, ಸಖ್ಯ ಮಾತ್ಮನಿವೇದನಂ

ಕೀರ್ತನ ಎಂದರೆ ಗಾನದ ಮೂಲಕ ದೇವರನ್ನು ಆರಾಧಿಸುವ ಮೇಲ್ಪಟ್ಟದ ಪೂಜಾವಿಧಾನ. ಇದರಲ್ಲಿ ಒಬ್ಬ ಸಂಗೀತಕಾರನೂ ಹಾಗೆ ಇತರರೂ ಭಾಗವಹಿಸುತ್ತಿದ್ದರು: ಚೆನ್ನಾಗಿ ಪಳಗಿದ ಕಂಠ ಶ್ರೀಯುಳ್ಳವನೇ ಭಾಗವತ. ಅಷ್ಟು ಚೆನ್ನಾಗಿ ಹಾಡಲು ಬಾರದ ಇತರರು ಅವನನ್ನು ಅನುಕರಿಸುವುದು ವಾಡಿಕೆ. ಭಾಗವತ ದೇವರ ಕೀರ್ತನೆಗಳನ್ನು (ಅಂದರೆ ಭಕ್ತಿ ಗೀತೆಗಳನ್ನು) ಹಾಡುತ್ತಾ ಹೋಗುವಾಗ ಇತರರು ಅವನನ್ನು ಅನುಕರಿಸುತ್ತಿದ್ದರು. ಈ ಪದ್ಧತಿಯಲ್ಲಿ ಶಾಸ್ತ್ರೀಯ ಹಾಗೂ ಜಾನಪದ ಶೈಲಿಗಳು ಮಿಶ್ರವಾಗಿರುವುದನ್ನು ಯಾರೂ ಕೇಳಬಹುದಿತ್ತು. ಭಾಗವತ, ಗೀತೆಯ ಒಂದು ಸಾಲನ್ನು ಹೇಳಿದೊಡನೆ ಇತರರೂ ಅವನಂತೆ, ಅವನನ್ನು ಅನುಕರಿಸಿ ಹಾಡುತ್ತಿದ್ದರು. ಒಬ್ಬನೇ ಹಾಡುವುದು, ಬಳಿಕ ವೃಂದಗಾನ ಇವು ಒಂದಾದಮೇಲೆ ಒಂದರಂತೆ ನಡೆಯುತ್ತಿದ್ದುವು. ಈ ಕೀರ್ತನೆಗಳ ಭಾಷೆ ತೀರ ಸರಳ, ನಿರಾಡಂಬರ, ಅರ್ಥವ್ಯಕ್ತಿ ಇದರ ಮುಖ್ಯ ಗುಣ ಎಂದರೂ ಸಲ್ಲುವುದು. ಇದರಲ್ಲಿ ಯತಿ -- ಪ್ರಾಸ ಮುಂತಾದ ಶಬ್ದಾಲಂಕಾರಗಳು ವಿಪುಲವಾಗಿರುತ್ತಿದ್ದುವು. ಕೀರ್ತನೆಯಲ್ಲಿರುವ ಸಾಹಿತ್ಯ ಭಾಗವು ಎಂದೂ ಇದರ ಗೇಯತೆಯನ್ನು ಮೀರಿನಿಲ್ಲುತ್ತಿರಲಿಲ್ಲ. ಕೆಲವೊಮ್ಮೆ ಸಾಹಿತ್ಯ ಸಂಗೀತ ಇವುಗಳ ಐಕ್ಯಭಾವ ಅಥವಾ ವಿಲೀನೀಕರಣವೇ ಇರುವ ಹಾಗೆ ಕಂಡುಬರುತ್ತಿತ್ತು. ಸಾಹಿತ್ಯ -- ಸಂಗೀತಗಳು ಅವಳಿ ಜವಳಿಗಳಂತೆ ಕಾಣುವುದು ಇಲ್ಲಿ.

ಏಕಾದಶೀ ದಿನ ಭಾಗವತರು (ಎಂದರೆ ಇಲ್ಲಿ ಭಕ್ತರು ಎಂದು ಅರ್ಥ) ರಾತ್ರಿ ಜಾಗರವಿದ್ದು ನಿದ್ರೆಮಾಡದೆ ಸರಿ ರಾತ್ರಿಯವರೆಗೂ ಹರಿನಾಮ ಕೀರ್ತನೆಯನ್ನು ಹಾಡಿಕೊಳ್ಳುವ ಸಂಪ್ರದಾಯವಿತ್ತು. ಇದನ್ನು ಭಜನೆ ಎಂದೂ ಹೇಳುವರು. ಆಗಿನವರಿಗೆ ಇದು ಒಂದು ರೀತಿ 'ಗೀತ ರಾತ್ರಿ'ಯೇ ಆಗಿತ್ತು. ಈ ಕಾಲದಲ್ಲಿ ಸಂಗೀತಕಚೇರಿಪದ್ಧತಿ ರೂಢಿಗೆ ಬಂದಿರಲಿಲ್ಲ. ಭಜನೆಮಾಡುತ್ತಿದ್ದ ಭಾಗವತರು ಒಮ್ಮೊಮ್ಮೆ ಕತೆಯನ್ನೂ ಹೇಳುತ್ತಿದ್ದರು. ಭಾಗವತರು ಗಾನವಿಶಾರದರೂ, ವಾಗ್ಮಿಗಳೂ ಆಗಿದ್ದುದರಿಂದ ಇದು

'ಹರಿಕತೆ'ಯ ರೂಪವನ್ನು ಪಡೆಯಿತು. ಇಂದಿಗೂ ಹರಿಕತೆಗೆ ಸಂಕೀರ್ತನ ಮತ್ತು ಕಾಲಕ್ಷೇಪ ಎಂಬ ಹೆಸರುಗಳಿರುವುದನ್ನು ಗಮನಿಸಬಹುದು. ಒಳ್ಳೆಯ ಸಂಗೀತಗಾರರು ಹರಿಕತೆಯನ್ನು ಮಾಡುತ್ತಾ ಅದರಲ್ಲಿ ವಿವಿಧ ರಾಗಗಳ ಹಾಡುಗಳನ್ನು ಹೇಳುತ್ತಿದ್ದುದರಿಂದ ಇದು ಹೆಚ್ಚಾಗಿ ಜನ ಪ್ರಿಯವಾಯಿತು. ಆಗಿನ ಕಾಲದಲ್ಲಿ ಇದು ಒಂದು ಸಾಂಸ್ಕೃತಿಕ ಕಾರ್ಯಕ್ರಮ ಎನ್ನಬೇಕು.

ಸಂಗೀತ ಕಚೇರಿ ಎಂಬುದು ಉರ್ದು ಶಬ್ದದಿಂದ ಬಂದುದಾದರೂ, ಆಗಲೇ ದಕ್ಷಿಣಭಾರತದಲ್ಲಿ ಸಂಗೀತಸಭಾ ಎಂಬುದು ಇದ್ದಂತೆ ಕಾಣುತ್ತದೆ. ಏನಿದ್ದರೂ ಇದು ಸಂಕೀರ್ತನ ಪದ್ಧತಿಯ ಸಮಕಾಲಿಕವಾಗಿಯೇ ಬಳಿಕವೋ ಬಂದಿರಬೇಕು. ಮೃಚ್ಛಕಟಿಕದಲ್ಲಿ ಚಾರುದತ್ತ, ರೇಭಿಲನ ಸಂಗೀತಕ್ಕೆ ಹೋಗಿದ್ದನೆಂಬ ಉಲ್ಲೇಖವಿದೆ. ಅಲ್ಲದೆ ಚಾರುದತ್ತ, ರೇಭಾಲನ ಸಂಗೀತವನ್ನು ಕುರಿತು--

ತಂ ತಸ್ಯ ಸ್ವರಸಂಕ್ರಮಂ ಮೃದುಗಿರಃ ಶ್ಲಿಷ್ಟಂ ಚ ತಂತ್ರೀಸನಂ
ವರ್ಣಾನಾಮಪಿ ಮೂರ್ಛನಾಂತರಗತಂ ತಾರಂ ವಿರಾಮೇ ಮೃದುಂ
ಹೇಲಾ ಸಂಯಮಿತಂ ಪುನಶ್ಚ ಲಲಿತಂ ರಾಗಾದ್ವಿರುಚ್ಚಾರಿತಂ
ಯತ್ಸತ್ಯಂ ವಿರತೇಽಪಿ ಗೀತ ಸಮಯೇ ಗಚ್ಛಾಮಿ ಶೃಣ್ವನ್ನಿವ

ಎಂದು ಬಣ್ಣಿಸುತ್ತಾನೆ. ಇದಕ್ಕಿಂತ ಹೆಚ್ಚಿನ ಸಂಗೀತ ವರ್ಣನೆ ಬೇಕೆ? ಬಹುಶಃ ಇಂತಹ ಸಂಗೀತದಲ್ಲಿ ರಾಗ -- ತಾನ -- ಪಲ್ಲವಿಗಳೇ ಇದ್ದಿರಬಹುದೆಂದು ಕಾಣುತ್ತದೆ. ಆದ್ದರಿಂದಲೇ ಮೃಚ್ಛಕಟಿಕದ ವಿದೂಷಕನಿಗೆ ಈ ಸಂಗೀತ ಮೆಚ್ಚಿಕೆಯಾಗಲಿಲ್ಲ. ಸಾಮಾನ್ಯ ಜನರನ್ನು ಮೆಚ್ಚಿಸಲಿಕ್ಕಾಗಿ ದಾಸರ ಹಾಡುಗಳು. ತರಂಗ, ಪದ ಮುಂತಾದುವನ್ನೂ ಸಂಗೀತಗಾರ ಮತ್ತೆ ಬಳಸಿಕೊಳ್ಳತೊಡಗಿದನೆಂದು ಕಾಣುತ್ತದೆ. ಮೊದಲು ಹರಿಕತೆ ಮಾಡುವವನೇ ಭಾಗವತನಾಗಿದ್ದು, ಬಳಿಕ ಈ ಹೆಸರು ಸಂಗೀತಗಾರರಿಗೂ ಅನ್ವಯಿಸಿತು.

ಹದಿನೈದನೇ ಶತಮಾನವು ಶಾಸ್ತ್ರೀಯ ಸಂಗೀತ ಮತ್ತು ಜಾನಪದ ಸಂಗೀತಗಳಿಗೆ ಗಮನಾರ್ಹವಾದ ಕಾಲ. ಭಕ್ತಿ ಪಂಥದ ಆಂದೋಲನ ಇಡೀ ಭಾರತದಲ್ಲೇ ನಡೆದ ಕಾಲವಿದು. ಸಾಧುಗಳು, ಸಂತರು, ವೀರಶೈವ ವಚನಕಾರರು, ಹರಿದಾಸ ಪಂಥದವರು ಹೀಗೆ ಎಲ್ಲೆಡೆಗಳಲ್ಲೂ ಭಕ್ತಿ ಪಂಥವನ್ನು ಇವರು ಪ್ರಚಾರಕ್ಕೆ ತಂದರು. ಈ ಕಾಲದಲ್ಲಿ ಸಾಹಿತ್ಯಕ್ಕೆಸಮತೂಕವಾಗಿ ಸಂಗೀತವನ್ನೂ ಅಳವಡಿಸಿದವರು ಪುರಂದರ ದಾಸರು. ಇವರಿಗೆ 'ಕರ್ನಾಟಕ ಸಂಗೀತ ಪಿತಾಮಹ' ಎಂಬ ಬಿರುದಿತ್ತು. ಈಗ ನಾವು ಯಾವುದನ್ನು ಕರ್ನಾಟಕೀ ಪದ್ಧತಿ ಎಂದು ಹೇಳುವೆವೋ ಅದಕ್ಕೆ ಭದ್ರವಾದ ಅಸ್ತಿವಾರ ಹಾಕಿದವರು ಶ್ರೀ ಪುರಂದರದಾಸರು. ಭಕ್ತಿ ಗೀತಗಳಲ್ಲಿ ಇವರ ಹಾಡುಗಳಿಗೆ ಇರುವ ಸ್ಥಾನ ಬಹಳ ಎತ್ತರವಾದದ್ದು, ಇವರ ಗುರುಗಳಾದ ವ್ಯಾಸರಾಯರೇ ಇವರ ಹಾಡುಗಳನ್ನು 'ಪುರಂದರೋ

ಪನಿಪತ್' ಎಂದು ಕರೆದಿದ್ದರಂತೆ. ಈ ಕಾಲದಲ್ಲಿ ಶ್ರೀ ವ್ಯಾಸರಾಯರು, ವಾದಿರಾಜಸ್ವಾಮಿಗಳು, ಪುರಂದರದಾಸರು, ವೈಕುಂಠದಾಸರು ಮತ್ತು ಕನಕದಾಸರು ಈ ಐವರು ದಾಸ ಸಾಹಿತ್ಯವನ್ನು ವಿಪುಲವಾಗಿ ಶ್ರೀಮಂತಗೊಳಿಸಿದರು. ಇವರನ್ನು 'ಪಂಚರತ್ನ' ಎಂದು ಕರೆಯುವುದು ವಾಡಿಕೆ. ಇವರಲ್ಲಿ ಮೊದಲಿನ ಇಬ್ಬರು ಯೋಗಿಗಳು ಮುಂದಿನ ಮೂವರು ಹರಿದಾಸರು. ವ್ಯಾಸರಾಯರು ಪ್ರಹ್ಲಾದನ ಅಂಶಸಂಭೂತರೆಂದೂ, ವಾದಿರಾಜರು ಲಾತವ್ಯರ ಅವತಾರ ವೆಂದೂ, ಪುರಂದರದಾಸರು ನಾರದನ ಅವತಾರವೆಂದೂ, ವೈಕುಂಠದಾಸರು ಅರ್ಜುನನ ಅವತಾರವೆಂದೂ, ಕನಕದಾಸರು ಯಮನ ಅಂಶಸಂಭೂತರೆಂದೂ ಒಂದು ನಂಬಿಕೆಯಿದೆ. ನಂಬಿಕೆಯ ಮಾತ ಹೇಗೂ ಇರಲಿ, ಅವರ ಕೃತಿಗಳಲ್ಲಿ ಅವರ ಪೂರ್ವ ಸಂಸ್ಕಾರದ ಗುಣವು ಕಾಣಬರುತ್ತದೆಯೆಂದರೆ ಅತ್ಯುಕ್ತಿಯಾಗಲಾರದೆಂದು ಕಾಣುತ್ತದೆ. ಪುರಂದರ ದಾಸರ ಸಾಹಿತ್ಯದಲ್ಲಿ ಉಪನಿಷತ್ತುಗಳ ಸಾರವು ತಿಳಿಗನ್ನಡದ ನುಡಿಯಲ್ಲಿ ಸಂಗ್ರಹವಾಗಿರುವುದಲ್ಲದೆ, ಅನೇಕ ರಾಗಗಳ ಜೀವಭೂತವಾದ ಸರಳ ಸಂಚಾರವು ಕಾಣುತ್ತದೆ. ಈ ಹೊತ್ತು ನಾವು ಕಾಂಬೋದಿ, ಕಲ್ಯಾಣಿ, ತೋಡಿ, ಮಧ್ಯಮಾವತಿ ಮೊದಲಾದ ಹಳೆಯರಾಗಗಳ ಸಹಜ ಸಂಚಾರಗಳನ್ನು ಅವರ ಕೃತಿಗಳಲ್ಲಿ ಕಾಣುತ್ತೇವೆ. ಇಂದು ಸಂಗೀತ ವಿದ್ವಾಂಸರು ದಾಸರ ಹಾಡುಗಳನ್ನು ನೆರವಲು, ಸ್ವರಪ್ರಸ್ತಾರಗಳೊಂದಿಗೆ ವೈದುಷ್ಯಪೂರ್ಣವಾಗಿ ಹಾಡಬಹುದು. ಅದು ಬೇರೆ ಮಾತು. ಆ ಹಾಡುಗಳನ್ನೇ ಹಳೆಯ ಶೈಲಿಯಲ್ಲಿ ಹಾಡಿದರೆ ಆಯಾ ರಾಗಗಳ ಹಳೆಯಸ್ವರಗಳು ಅಲ್ಲಿ ಮಿಡಿಯುವುದನ್ನು ಕೇಳಬಹುದು. ಪುರಂದರದಾಸರು ಸಂಗೀತ ಅಭ್ಯಾಸಿಗಳಿಗೆ ಅನುಕೂಲವಾಗುವಹಾಗೆ ಸ್ವರಾವಳಿ, ಜಂಟಿವರಸೆ, ಗೀತೆ, ಸ್ವರಜತಿ ಇವನ್ನೆಲ್ಲಾ ರಚಿಸಿದ್ದರು. ಹಾಗೆ ಕೀರ್ತನೆಗಳು, ಸುಳಾದಿ, ಉಗಾಭೋಗ, ವೃತ್ತನಾಮ ಮುಂತಾದ ದಾಸ ಸಾಹಿತ್ಯದ ಪ್ರಕಾರಗಳನ್ನೂ ರಚಿಸಿದ್ದರು. ಆದುದರಿಂದ ಇವರಿಗೆ 'ಕರ್ಣಾಟಕ ಸಂಗೀತ ಪಿತಾಮಹ' ಎಂಬ ಬಿರುದು ಅನ್ವರ್ಥವಾಗಿದೆ. ಕರ್ಣಾಟಕ ಸಂಗೀತಕ್ಕೆ ಆದಿಗುರುವೇ ಪುರಂದರ ದಾಸರು ಎಂದರೂ ಸಲ್ಲುತ್ತದೆ.

ದಾಸಸಾಹಿತ್ಯದ ಈ ಪ್ರಕಾರಗಳ ರಚನೆ ನರಹರತೀರ್ಥರ ಕಾಲದಿಂದಲೇ ಆಗುತ್ತಿದ್ದರೂ, ಈ ಸಾಹಿತ್ಯದ ಸ್ಪಷ್ಟವಾದ ರೂಪರೇಖೆಗಳು ಸಿಗುವುದು ಶ್ರೀಪಾದರಾಜರ ಕೀರ್ತನೆಗಳಲ್ಲಿ. ಮುಂದೆ ವ್ಯಾಸರಾಯರು ಮತ್ತು ಅವರ ಶಿಷ್ಯ ಪರಂಪರೆಯಲ್ಲಿ ಇದು ಬೆಳೆಯಿತು. ನರಹರಿ ತೀರ್ಥರು ಬರೆದ ನಾಲ್ಕು ಹಾಡುಗಳು ಮಾತ್ರ ಸಿಕ್ಕಿವೆ. ಮೂರರಲ್ಲಿ 'ರಘುಪತಿ'ಯೆಂದೂ, ನಾಲ್ಕನೆಯದರಲ್ಲಿ 'ನರಹರಿ' ಯೆಂದೂ ಅಂಕಿತವಿದೆ. ದಾಸಪಂಥದವರು ಹೆಚ್ಚಾಗಿ ವಿಠಲ ಅಂಕಿತದವರು. ಆದರೆ ಮಠಾಧೀಶರುಗಳಲ್ಲಿ ಶ್ರೀಪಾದ ರಾಜರನ್ನು ಬಿಟ್ಟರೆ ಉಳಿದವರುಗಳಲ್ಲಿ ಇಷ್ಟದೇವತೆಯ ಅಂಕಿತವೇ ಹೊರತು ವಿಠಲ ಅಂಕಿತವಿಲ್ಲ. ಹರಿದಾಸ ಪರಂಪರೆಯಲ್ಲಿ ವಿಠಲನ ಆರಾಧನೆಯು ತುಂಬ ಕುತೂಹಲಕಾರಿಯಾದುದು. ಪಂಡರಪುರದ ವಿಠಲ, ಉಡುಪಿ ಕೃಷ್ಣ, ತಿರುಪತಿ ವೆಂಕಟೇಶ, ಶ್ರೀರಂಗದ ರಂಗನಾಥ, ಬೇಲೂರು ಚೆನ್ನಕೇಶವ, ಇವರು ಬಹುಮಟ್ಟಿಗೆ ದಾಸರಿಗೆ

ಅನುಗ್ರಹ ಮಾಡಿದ ದೇವತೆಗಳು. ದಾಸರು ತಮ್ಮ ಬಿಂಬಮೂರ್ತಿಯ ಹೆಸರಿನೊಂದಿಗೆ 'ವಿಠಲ' ಎಂಬ ಪದವನ್ನು ಸೇರಿಸಿಯೇ ಅಂಕಿತವನ್ನು ಹಾಕುತ್ತಿದ್ದರು. ಉದಾ - ಪುರಂದರ ವಿಠಲ, ಜಗನ್ನಾಥವಿಠಲ, ವಿಜಯವಿಠಲ, ಇತ್ಯಾದಿ ವಿಠಲ ಸೇರಿಸದ ಮುದ್ರಿಕೆಯಿರುವ ದಾಸರೂ ಇದ್ದರು. ಉದಾ - ಹೆಳವನ ಕಟ್ಟೆರಂಗ, ಮಹೀಪತಿಸ್ವಾಮಿ, ಇತ್ಯಾದಿ ದಾಸ ಸಾಹಿತ್ಯದಲ್ಲಿ ಕಾಣುವ -- ಪಲ್ಲವಿ, ಅನುಪಲ್ಲವಿ, ಚರಣ, ಮತ್ತು ಅಂಕಿತ ಈ ಅಂಶಗಳು ಬಹಳ ಹಿಂದಿನಿಂದಲೇ ಬಂದಿವೆ. ವೀರಶೈವರ ವಚನಗಳಲ್ಲಿ -- ಸರ್ವಜ್ಞನ ತ್ರಿಪದಿಯಲ್ಲಿ ಅಂಕಿತಮಾತ್ರವಿರುವುದು ಕಂಡುಬರುತ್ತದೆ. ಜಯದೇವನ ಗೀತಗೋವಿಂದದಲ್ಲಿ ಧ್ರುವ (ಪಲ್ಲವಿ), ಚರಣ ಮತ್ತು ಅಂಕಿತಗಳು ದೊರೆಯುತ್ತವೆ. ಈ ರೀತಿಯ ಸಂಗೀತ ಕೃತಿಗಳ ರಚನೆಯನ್ನು ಮೊದಲು ಮಾಡಿದವರು ತಾಳ್ಳಪಾಕ ಅನ್ನಮಾಚಾರ್ಯರು ಎಂಬ ಹೇಳಿಕೆಯಿದೆ. ಆದರೆ ಅದಕ್ಕಿಂತಲೂ ಹಿಂದಿನ ನರಹರಿ ತೀರ್ಥರ ರಚನೆಯಲ್ಲೇ ಈ ಅಂಶಗಳು ಕಂಡುಬರುವುದರಿಂದ ಇದು ವಿಮರ್ಶನೀಯ.

ಶ್ರೀ ಮಧ್ವಾಚಾರ್ಯರ ದ್ವಾದಶಸ್ತೋತ್ರಗಳಲ್ಲೇ ದಾಸಸಾಹಿತ್ಯದ ಮೂಲರೂಪವು ಕಂಡುಬರುವುದರಿಂದ, ಆ ಮಾದರಿಯಲ್ಲಿ ಕನ್ನಡದ ಆಡು ನುಡಿಯಲ್ಲಿ ಕೃತಿರಚನೆ ಮಾಡುತ್ತಾ ಬಂದು ಪುರಂದರದಾಸರ ಕಾಲದಲ್ಲಿ ಅದಕ್ಕೊಂದು ಖಚಿತವಾದ ರೂಪ ಬಂದಿರಬೇಕೆಂದು ಕಾಣುತ್ತದೆ. ಹೇಗಿದ್ದರೂ ದಾಸಸಾಹಿತ್ಯದಲ್ಲಿರುವ ಗೇಯಗುಣ ಪುರಂದರ ದಾಸರ ಕೃತಿಗಳಲ್ಲೇ ಹೆಚ್ಚಾಗಿ ಕಂಡುಬರುತ್ತದೆಯೆಂದರೆ ತಪ್ಪಲ್ಲ. ಇವರ ಸಮಕಾಲೀನರಾಗಿದ್ದವರ ಕೃತಿಗಳಲ್ಲೂ ಪುರಂದರ ದಾಸರ ಪ್ರಭಾವವಿದ್ದೇ ಇದೆ. ಪುರಂದರ ದಾಸರು ಬಳಸಿದ ರಾಗ--ತಾಳಗಳೇ ಹೆಚ್ಚಾಗಿ ಇತರರ ಕೀರ್ತನೆಗಳಲ್ಲೂ ಕಂಡುಬರುತ್ತದೆ. ಆ ಕಾಲದಲ್ಲಿ 'ಬತ್ತೀಸರಾಗ' ಗಳೆಂದು ಪ್ರಸಿದ್ಧವಾದ 32 ರಾಗಗಳು ಮಾತ್ರ ಬಳಕೆಯಲ್ಲಿದ್ದಿರಬೇಕು. ಬಸವಣ್ಣನವರು ಒಂದು ವಚನದಲ್ಲಿ--

ಎನ್ನ ಕಾಯವ ದಂಡಿಗೆಯ ಮಾಡಯ್ಯ<br>
ಎನ್ನ ಶಿರವ ಸೋರೆಯ ಮಾಡಯ್ಯ<br>
ಎನ್ನ ನರವ ತಂತಿಯ ಮಾಡಯ್ಯ<br>
ಎನ್ನ ಬೆರಳ ಕಡ್ಡಿಯ ಮಾಡಯ್ಯ<br>
ಬತ್ತೀಸ ರಾಗವ ಹಾಡಯ್ಯ<br>
ಉರದಲೊತ್ತಿ ಬಾರಿಸು, ಕೂಡಲಸಂಗಮದೇವಾ

ಎಂದಿರುವರು. ಪುರಂದರ ದಾಸರೂ ತಮ್ಮ ಒಂದು ಕೀರ್ತನೆಯಲ್ಲಿ

ರಾಗ -- ಆನಂದಭೈರವಿ -- ಅಟತಾಳ

ತುತ್ತುರು ತೂರೆಂದು ಬತ್ತೀಸರಾಗಗಳನು<br>
ಚಿತ್ತವಲ್ಲಭ ತನ್ನ ಕೊಳಲನೂದಿದನು ಪ

ಗೌಳಿ, ನಾಟಿ, ಆಹೇರಿ, ಗೂರ್ಜರಿ,
ಮಾಳವಿ, ಸಾರಂಗ, ರಾಗಕೇಳಿ ರಮಣಿಯರತಿದೂರದಿಂದ
ಫಲಮಂಜರಿ, ಭೌಳಿ, ದೇಶಾಕ್ಷರಿ ರಾಗಂಗಳನು
ನಳಿನನಾಭನು ತನ್ನ ಕೊಳಲ ನೂದಿದನು ೧

ಇದರಲ್ಲಿ ಬತ್ತೀಸರಾಗಗಳಲ್ಲಿ ಕೆಲವನ್ನು ಮಾತ್ರ ಸೂಚಿಸಿರುವರು. ಇವರೇ ತಮ್ಮ ಇನ್ನೊಂದು ಪದ್ಯದಲ್ಲಿ --

ರಾಗ -- ಶಂಕರಾಭರಣ -- ಅಟ ತಾಳ

ನಳಿನಜಾಂಡ ತಲೆಯ ತೂಗಿ ಮೋಹಿಸುತಿರಲು
ಕೊಳಲ ನೂದಿ ಭ್ರಾಜಿಸುವ ಚೆಲುವ ಕೃಷ್ಣರಾಯನ ನೋಡಿ ಪ

ಮಾರವ, ದೇಶಿ, ಗುಜ್ಜರಿ, ಭೈರವಿ, ಗೌಳಿ, ನಾಟಿ, ಸಾವೇರಿ, ಆಹೇರಿ
ಪೂರ್ವಿ, ಕಾಂಭೋಜಿ, ಪಾಡಿ, ದೇಶಾಕ್ಷಿ, ಶಂಕರಾಭರಣ, ಮಾಳವಿ
ವರಾಳಿ, ಕಲ್ಯಾಣಿ, ತೋಡಿ, ಮುಖಾರಿ, ಯರಳಿ, ವಸಂತ, ಭೌಳಿ, ಧನಶ್ರೀ
ಸೌರಾಷ್ಟ್ರ, ಗುಂಡಕ್ರಿಯ, ರಾಮಕ್ರಿಯ, ಮೇಘ, ಕುರಂಜಿಯು ಪಾಡಲು ನೋಡಿ

ಎಂದು 27 ರಾಗಗಳ ಹೆಸರುಗಳನ್ನು ಹೇಳಿರುವರು. ಈ ಪಟ್ಟಿಗೇ ಸೇರುವ ಇನ್ನೂ ಐದು ರಾಗಗಳು ಸೇರಿ 32 ರಾಗಗಳಾಗಿರಬಹುದು. ಆದರೆ ಅದೇ ಕಾಲದಲ್ಲಿ ಪ್ರಚಲಿತವಾಗಿದ್ದ ಇನ್ನೂ ಕೆಲವು ಗ್ರಂಥಗಳಲ್ಲಿರುವ ಬತ್ತೀಸರಾಗಗಳ ಪಟ್ಟಿಯಲ್ಲಿ ಮತ ಭೇದ ವಿರುವುದೂ ಇದೆ. ಹೀಗಾಗಿ ಸಾಮಾನ್ಯವಾಗಿ ಮೇಲಿನ ರಾಗಗಳನ್ನಷ್ಟೇ ಅವರು ಪ್ರಯೋಗಿಸಿರಬಹುದೆಂದು ಕಾಣುತ್ತದೆ. ಕನಕದಾಸರ ಒಂದು ಉದಯರಾಗದಲ್ಲಿ---

ರಾಗ -- ಭೂಪ -- ಝುಂಪೆತಾಳ

ತಂಗದಿರನನಿಮಿಷ ತಾರಕೆಗಳು ಮಸುಳಿ ನೆಪ
ತಂಗ ಪರ್ವತವ ಅಡರಿಬಂದನು
ಜಂಗಮಗಳೆದ್ದು ಜಯಜಯವೆನುತಿರೆ ನರ--
ಸಿಂಗನೊಲಿದುಪ್ಪವಡಿಸೋ ಹರಿಯೆ ಪ

ತಾಳ ದಂಡಿಗೆ ವಿಡಿದು ತುಂಬುರು ನಾರದರು
ಪಾಳಿ, ದೇಶಾಕ್ಷಿ, ನಾರಾಯಣಿ, ಗುಜ್ಜರಿ,
ಮಾಳವಿ, ಶ್ರೀ, ದೇವಗಾಂಧಾರಿ, ಮಲಹರಿ,

ಸಾಳಗವು, ಸೌರಾಷ್ಟ್ರ, ಗುಂಡಕ್ರಿಯಾ, ಲಲಿತ,
ಸೂಳಾದಿಯಲಿ ನಾಮಕೀರ್ತನೆಗಳ ಪಾಡಿ
ಮೇಳೈಸಿ ವಾದ್ಯನೃತ್ಯಗಳಾಡುತಿರಲು ಪಶು
ಪಾಲನುಪ್ಪವಡಿಸೊ ಹರಿಯೆ ೫

ಎಂದಿರುವರು. ಹಿಂದಿನ ಪಟ್ಟಿಯಲ್ಲಿಲ್ಲದ ಕೆಲವು ಹೊಸ ರಾಗಗಳು (ನಾರಾಯಣಿ, ಮಲಹರಿ, ಶ್ರೀ, ಲಲಿತ, ದೇವಗಾಂಧಾರಿ) ಇಲ್ಲಿ ಬಂದಿವೆ. ಆದರೆ ಪುರಂದರ ದಾಸರು ಸರಳೆವರಸೆಗೆ ಮೊದಲಾಗಿ ಪ್ರಯೋಗಿಸಿದ ಮಾಯಾಮಾಳವ ಗೌಳ ರಾಗದ ಉಲ್ಲೇಖವೇ ಇಲ್ಲ. ಇದು ಒಂದು ಪ್ರಮುಖ ರಾಗ. ಆದುದರಿಂದ ಈ ಕಾಲದಲ್ಲಿ 32 ರಾಗಗಳು ಮಾತ್ರವಲ್ಲದೆ ಇನ್ನೂ ಹೆಚ್ಚಿನ ರಾಗಗಳ ಆವಿಷ್ಕಾರವೂ ಆಗಿರಬಹುದು.

ತಾಳಗಳ ಮಟ್ಟಿಗೆ ಸೂಳಾದಿ ಸಪ್ತತಾಳಗಳ ಹೊರತು ಇತರ ತಾಳಗಳು ಕಾಣುವುದಿಲ್ಲ. ಅವೆಂದರೆ, ಧ್ರುವ, ಮಠ್ಯ ರೂಪಕ, ಝಂಪೆ, ತ್ರಿಪುಟ, ಅಟ, ಮತ್ತು ಏಕತಾಳಗಳು. ಆದರೆ ಇವುಗಳ ಸ್ವರೂಪ ಮಾತ್ರ ಬೇರೆಯಾಗಿದ್ದಿರಬೇಕು. ಧ್ರುವ ಬಹಳ ಅಪೂರ್ವವಾಗಿ ದೊರೆಯುತ್ತದೆ. ಮಠ್ಯಕ್ಕೆ ಈಗಿನ ಅಂಗಲಕ್ಷಣ (101) ಇದ್ದಿರಲಾರದು. ಝಂಪೆಯು ಐದು ಮಾತ್ರೆಯದು (ಅರಝಂಪೆ). ತ್ರಿಪುಟವೇ ಚಾಪುತಾಳವಾಗಿರಬೇಕು. ಅಟತಾಳವೂ ಸ್ವಲ್ಪಮಟ್ಟಿಗೆ ಈಗಿರುವುದಕ್ಕಿಂತ ಬೇರೆ. ಏಕತಾಳ ಮಾತ್ರ ಈಗಿನ ಹಾಗೆ ಆಗಲೂ ಇದ್ದಿರಬಹುದೆಂದು ಅವರ ಕೀರ್ತನೆಗಳಿಂದ ತಿಳಿದುಬರುತ್ತದೆ.

ಈ ಹಿನ್ನೆಲೆಯಲ್ಲಿ ನಾವು ಕನಕದಾಸರ ಕೃತಿಗಳಲ್ಲಿ ಗೇಯತೆಯ ಅಂಶ ಎಷ್ಟರ ಮಟ್ಟಿಗೆ ಬಂದಿದೆ ಎಂಬುದನ್ನು ಪರಿಶೀಲಿಸಬೇಕು. ಕನಕದಾಸರು ಅಂಡೆಕುರುಬರ ಜಾತಿಯಲ್ಲಿ ಹುಟ್ಟಿ (ಕ್ರಿ.ಶ. 1508 ರಿಂದ 1606 ರ ವರೆಗೆ) 98 ವರ್ಷಗಳ ವರೆಗೆ, ಸುದೀರ್ಘಕಾಲ ಬಾಳಿದವರು. ಬಂಕಾಪುರದ ಬಾಡ ಎಂಬ ಹಳ್ಳಿ ಇವರ ಜನಸ್ಥಳ. ಬೀರೇಗೌಡ -- ಬಚ್ಚಮ್ಮ ಎಂಬ ದಂಪತಿಗಳು ಇವರ ತಂದೆ ತಾಯಿಯರು. ಇದನ್ನೇ ಇವರು ತಮ್ಮ ಒಂದು ಕೀರ್ತನೆಯಲ್ಲಿ--

ರಾಗ -- ಕಾಂಬೋದಿ -- ಝಂಪೆತಾಳ

ನಾವು ಕುರುಬರು ನಮ್ಮ ದೇವರು ಬೀರಯ್ಯ
ಕಾವ ನಮ್ಮಜ್ಜ ನರಕುರಿ ಹಿಂಡುಗಳ ಪ

ಅರುಹೆಂಬ ನರಕುರಿಯು ತೆರೆಯೆಂಬ ಜಾವಲಿಯು
ಮರವೆಯಲಿ ಯಮನೆಂಬ ತೋಳ ತುಡುರೆ
ಅರುಹಿನಾ ಮರೆಯಲ್ಲಿ ಕುರಿಯ ಮುರಿವುದ ಕಂಡು
ಅರಿತು ಅರಿಯದ ಹಾಗೆ ಇರುವ ನಮ್ಮಜ್ಜ

ಬಂದಿದೆ.

ಬಹುಕಾಲ ಮಕ್ಕಳಾಗದಿದ್ದ ತಂದೆತಾಯಿಯರಿಗೆ ತಿರುಪತಿ ದೇವರ ಅನುಗ್ರಹ ದಿಂದ ಕನಕ ಹುಟ್ಟಿದ. ಇವನಿಗೆ ತಿಮ್ಮ ನಾಯಕನೆಂದೇ ಹೆಸರು ಇಟ್ಟರು. ಇವನು ಸೇನಾಪತಿಯೂ ಅಂದರೆ ದಂಡನಾಯಕನೂ (ಡಣಾಯಕ) ಆಗಿದ್ದ. ಒಮ್ಮೆ ಇವನಿಗೆ ಹೂತಿಟ್ಟ ನಿಧಿ ಸಿಕ್ಕಿದುದರಿಂದ ಇವನಿಗೆ ಕನಕ ಎಂಬ ಹೆಸರಾಯಿತು. ಒಮ್ಮೆ ಯುದ್ಧದಲ್ಲಿ ಗಾಯಗೊಂಡು ಬಿದ್ದಿರುವಾಗ ತಿರುಪತಿಯ ದೇವರೇ ಬಂದು 'ಬಾ ತಿಮ್ಮ ನನ್ನ ದಾಸ ನಾಗು' ಎಂದು ಹೇಳಿದಂತಾಯಿತು. ಮೈಮೇಲಾದ ಗಾಯದ ಮೇಲೆ ಯಾರೋ ಕೈಸ ವರಿದಂತಾಗಿ ಎಚ್ಚೆತ್ತ. ಗಾಯವೆಲ್ಲಾ ಮಾಯವಾಗಿದ್ದಿತು. ಕೂಡಲೇ ಕನಕನ ಮನಸ್ಸು ವೈರಾಗ್ಯದತ್ತ ಒಲಿಯಿತು. ವ್ಯಾಸರಾಯ ಸ್ವಾಮಿಗಳಲ್ಲಿಗೆ ಬಂದು ದಾಸ ದೀಕ್ಷೆಯನ್ನು ವಹಿಸಿ, ಅವರ ಶಿಷ್ಯನಾಗಿ, ಅವರ ಪೂಜಾವೇಳೆಯಲ್ಲಿ ನಗಾರಿ ಬಡಿಯುತ್ತಾ, ಅವರ ತತ್ವೋಪದೇಶವನ್ನು ಕೇಳುತ್ತಾ ವ್ಯಾಸರಾಜರಿಗೂ, ವಾದಿರಾಜರಿಗೂ ಪರಮ ಆಪ್ತನಾ ಗಿದ್ದ. ಪುರಂದರ ದಾಸರ ಒಡನಾಟವೂ ಲಭಿಸಿತು. ಅವನು ಮತ್ತೆ ಕನಕದಾಸನೆಂದೇ ವಿಖ್ಯಾತನಾದ.

ಕನಕ ಹುಟ್ಟಿನಿಂದಲೇ ವೀರ -- ಈಗ ಭಕ್ತ, ಕವಿ, ದಾರ್ಶನಿಕ, ಅನುಭಾವಿ. ಸುತ್ತ ಲಿರುವ ಅಸೂಯಾಪರರಾದ ಕುಹಕಿಗಳು ಇವನ ಮೇಲಿನ ಮತ್ಸರದಿಂದ, ಅವನು ಕುರುಬ, ಜಾತಿಹೀನ ಎಂದು ತೆಗಳುತ್ತಿದ್ದರು. ಇಂತಹ ಒಂದು ಸಂದರ್ಭದಲ್ಲೇ ಮೇಲಿನ ಹಾಡನ್ನು ಹಾಡಿರಬೇಕು. ಇಂತಹದೇ ಅನೇಕ ಸಂದರ್ಭಗಳಲ್ಲಿ ಅವನ ಮಾತುಗಳು ನಿಷ್ಠುರ ಸತ್ಯವನ್ನು ಸಾರುತ್ತವೆ. ಮೊನಚಾಗಿಯೂ ಇವೆ.

ಕನಕದಾಸರಿಗೆ ಗುರು ವ್ಯಾಸರಾಯರು. ವಾದಿರಾಜರು, ಪುರಂದರದಾಸರು ಮತ್ತು ವೈಕುಂಠದಾಸರು. ಇವರೆಲ್ಲ ಆತ್ಮೀಯರಾಗಿದ್ದರಲ್ಲದೆ ಇವರ ಪ್ರಭಾವವೂ ಕನಕ ದಾಸರ ಮೇಲೆ ತೀವ್ರತರವಾಗಿ ಆಗಿತ್ತು. ಅಧ್ಯಾತ್ಮದ ಸಾಧನೆಯ ಮಾರ್ಗದಲ್ಲಿ ತೊಡಗಿದ ಜೀವನ ಎಷ್ಟು ಉದಾತ್ತವಾದುದು ಎಂಬುದನ್ನು ಕನಕದಾಸರು ಕಾಣಬಲ್ಲವರಾಗಿದ್ದರು. ಸುತ್ತಲಿನ ಜನಗಳ ತಿರಸ್ಕಾರ, ಹಲ್ಲುಕಿರಿಯುವುದು, ಅಣಕ, ಕುಹಕ ಇವೆಲ್ಲವುಗಳಿಂದ ಕನ ಕದಾಸರ ಮನಸ್ಸಿಗೆ ಸಾಕಷ್ಟು ಪ್ರಮಾಣದಲ್ಲಿ ನೋವೂ ಉಂಟಾಗಿತ್ತು. ಹೊರಗಿನ ಈ ಇರಿತಗಳಿಂದ ಕನಕದಾಸರ ಮನಸ್ಸು ಗಟ್ಟಿ ಚಿನ್ನವಾಗುತ್ತಾ ಹೋಯಿತು. ಯಾವುದಕ್ಕೂ ಸಗ್ಗದ ಧೈರ್ಯ, ಕೆಚ್ಚು ಅವನಲ್ಲಿ ಉಂಟಾಯಿತು. ಚಿತ್ತ ಶುದ್ಧಿಯಿಲ್ಲದವರೊಡನೆ ಅವನು ಎಂದೂ ನೇರವಾಗಿ ಮಾತಾಡುತ್ತಿರಲಿಲ್ಲ. ಅಂತೆಯೇ ಕನಕದಾಸರ ಕೀರ್ತನೆಗಳು ಎಷ್ಟು ಸರಳವೋ ಅಷ್ಟೇ ಜಟಿಲ. ಎಷ್ಟು ನವುರೋ ಅಷ್ಟೇ ಗಟ್ಟಿ. ಹೆಚ್ಚಿನ ಭಾಗ ಅರ್ಥವಾಗು ವುದೇ ದುಸ್ತರವಾಗುತ್ತಿತ್ತು.

ದಾಸಸಾಹಿತ್ಯ ಭಕ್ತಿ ಪ್ರಧಾನವಾದದ್ದು. ಹರಿದಾಸ ಪಂಥಕ್ಕೆ ಸೇರಿದವರೆಲ್ಲಾ ದ್ವೈತ ಮತದವರು. ಭಕ್ತ ತನ್ನ ಆತ್ಮಶೋಧನೆ ಮಾಡಿ ಹರಿಯ ಅನುಗ್ರಹವನ್ನು ಪಡೆದು, ಆ ಆನಂದಾನುಭವವನ್ನು ಸಕಲರಿಗೂ ಉಪದೇಶಿಸಿ, ಅವರನ್ನು ಉದ್ಧಾರ ಮಾಡುವುದೇ ಹರಿದಾಸ ಪಂಥದವರ ಮುಖ್ಯಧ್ಯೇಯವಾಗಿತ್ತು. ಇದರಿಂದ ದ್ವೈತವೇದಾಂತದ ತಿರುಳು ಕನ್ನಡ ನುಡಿಯಲ್ಲಿ ಬಂದಿತು. ವೇದ, ಉಪನಿಷತ್ತು, ಗೀತೆ, ಭಾರತ, ಭಾಗವತ, ರಾಮಾಯಣ ಇವುಗಳ ನವನೀತ ಈ ಸಾಹಿತ್ಯದಲ್ಲಿ ಘನೀಕರಿಸಿ ನಿಂತಿತು. ಇಷ್ಟು ಮಾತ್ರವಲ್ಲದೆ, ಸಮಾಜದ ವಿವಿಧ ಮುಖಗಳ ಪರಿಶೀಲನೆ, ಬದುಕಿನ ನಾನಾ ಸಮಸ್ಯೆಗಳು, ಅವುಗಳ ಪರಿಹಾರ, ತತ್ವೋಪದೇಶ ಇವೆಲ್ಲಾ ಈ ಸಾಹಿತ್ಯದ ದಿಗಂತದಲ್ಲಿ ಕಾಣಿಸತೊಡಗಿದವು.

ಕನಕದಾಸರು ಸ್ವಾಭಾವಿಕವಾಗಿ ಕವಿ, ಗಾಯಕರಲ್ಲ. ಇವರ ಕೃತಿಗಳು ಮೋಹನ ತರಂಗಿಣಿ (ಸಾಂಗತ್ಯಕಾವ್ಯ), ನಳಚರಿತ್ರೆ (ಭಾಮಿನಿ ಷಟ್ಪದಿ), ರಾಮಧಾನ್ಯಚರಿತ್ರೆ (ಭಾಮಿನಿಷಟ್ಪದಿ), ಹರಿಭಕ್ತಿಸಾರ (ಭಾಮಿನಿಷಟ್ಪದಿಯ ಶತಕಕಾವ್ಯ). ಆದರೆ ಇದರಲ್ಲಿ--

ಈ ತೆರದೊಳಚ್ಯುತನ ನಾಮವ
ನೂತನದಿ ವಸುಧಾ ತಳದಿ ವಿ
ಖ್ಯಾತಿಯಲಿ ಬಣ್ಣಿಸಿದ ಕನ್ನಡ ಕುಸುಮ ಷಟ್ಪದಿಯ

ಎಂದಿರುವುದು ಅಚ್ಚರಿ. ಆಗ ಇದಕ್ಕೇ ಕುಸುಮ ಎಂಬ ಹೆಸರು ಇದ್ದಿರಬಹುದೇ? ಇದರಲ್ಲಿ ಗೇಯ ಗುಣವೇನೋ ಚೆನ್ನಾಗಿದೆ. ಉದಾ -

"ದೀನ ನಾನು ಸಮಸ್ತ ಲೋಕಕೆ
ದಾನಿ ನೀನು ವಿಚಾರಿಸಲು ಮತಿ
ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು
ಏನ ಬಲ್ಲೆನು ನಾನು ನೆರೆಸು
ಜ್ಞಾನ ಮೂರಿತಿ ನೀನು ನಿನ್ನ ಸ
ಮಾನರುಂಟೇ ದೇವರಕ್ಷಿಸು ನಮ್ಮನನವರತ"

ನೃಸಿಂಹಸ್ತವ ಎಂಬುದೂ ಇವರದೇ ಎಂದು ಕಾಣುತ್ತದೆ. ಇವಲ್ಲದೆ ಅನೇಕ ಕೀರ್ತನೆಗಳನ್ನೂ ಉಗಾಭೋಗಗಳನ್ನೂ ಬರೆದಿದ್ದಾರೆ. ಇವುಗಳಲ್ಲಿ ಪ್ರಯೋಗಿಸಿದ ಛಂದಸ್ಸು ಹಾಡಲು ಯೋಗ್ಯವಾದದು. ಅಲ್ಲದೆ ಇವರಿಗೆ ಗೇಯಕಾವ್ಯದ ತಂತ್ರಜ್ಞಾನವೂ ಚೆನ್ನಾಗಿ ಇದ್ದಿತೆಂದು ಕಾಣುತ್ತದೆ. ಹ್ರಾಸ -- ವಡಿಗಳನ್ನು ಬಳಸಿ ತನ್ನ ಮೋಹನ ತರಂಗಿಣಿಯನ್ನು ಬರೆದಂತೆ ಹೇಳಿಕೊಂಡಿದ್ದಾರೆ. ಅದಕ್ಕೆ ಒಂದು ಉದಾಹರಣೆಯನ್ನು ಮೋಹನತರಂಗಿಣಿಯಲ್ಲೇ ನೋಡೋಣ--

ಮಾಣದರಸುವಂತೆ -- ಮಾಡದಿರಧಿಕಸು
ಜಾಣರ ಜ್ಞಾನ ಲೋಚನ ಕೆ
ಕಾಣಬರ್ಪಂತೆ -- ಕನ್ನಡ ವಾಕ್ಯದೆ ನೆರೆ
ಜಾಣ! ಸತ್ಕೃತಿಯ ವಿಸ್ತರಿಸು

ಪದ್ಯಪಾದದ ಆದ್ಯವರ್ಣವು ವಳಿ (ಯತಿ) ದ್ವಿತೀಯ ವರ್ಣವು ಪ್ರಾಸ.

ಪ್ರಾಸವೆನಲ್ಕೆರಡನೆಯದು
ಭಾಸುರತರದಾದಿ ವರ್ಣ ವಡಿ ಮೇದಿನಿಯೊಳ್
ಪ್ರಾಸವದು ಚರಣ ಕೆಲ್ಲಕೆ
ಲಾಸವುಕೇಳ್ ವಡಿಯೆ ಪಾದಪಾದಕೆ ಸಖಿಯೇ

--ನಂದಿ ಛಂದಸ್ಸು

ಪದ್ಯದ ಒಂದು ಚರಣದಲ್ಲಿ ನಾಲ್ಕು ಪಾದಗಳಿರುತ್ತವೆ. ಪ್ರತಿಪಾದದ ಎರಡನೇ ವರ್ಣವು ಸಮಾನವಾಗಿ ನಾಲ್ಕು ಪಾದಗಳಲ್ಲೂ ಇರುವುದು ಪ್ರಾಸ. ಪಾದವೊಂದರಲ್ಲಿ ತಾಳದ ಆವರ್ತಾಂಶಗಳಲ್ಲಿ ನಿಲ್ಲಿಸುವುದು ವಳಿ. ಇದನ್ನು ದಾಸಸಾಹಿತ್ಯದಲ್ಲಿ ಯತಿ ಎನ್ನುವರು. ಕನಕದಾಸರಿಗೆ ಈ ಯತಿಯ ವಿಚಾರ ತಿಳಿದಿದ್ದರೂ ಅವರ ಕೀರ್ತನೆಗಳಲ್ಲಿ ಇದನ್ನು ನಿಯತವಾಗಿ ಬಳಸಲಿಲ್ಲ. ಪುರಂದರದಾಸರ ಕೀರ್ತನೆಗಳಲ್ಲಿ ಇದು ಚೆನ್ನಾಗಿ ಬಂದಿದೆ. ಕನಕದಾಸರ ಕೃತಿಗಳೆಲ್ಲಾ ಹಾಡುಗಬ್ಬದಲ್ಲೇ ಇವೆ. ಆದರೆ ಅವುಗಳಲ್ಲಿ ಹಾಡಿನ ನಡೆ ಅಥವಾ ಪಲುಕು ಎಷ್ಟರ ಮಟ್ಟಿಗೆ ಇದೆ ಎಂಬುದನ್ನು ಪರಿಶೀಲಿಸಬೇಕು.

ಈಶನ ಕರುಣೆಯ ನಾಶಿಸು ವಿನಯದಿ
ದಾಸನ ಹಾಗೆ ನೀ ಮನವೆ (ಶರಷಟ್ಪದಿ)

ತಿರುಕನೋರ್ವ ನೂರ ಮುಂದೆ ಮುರುಕುಧರ್ಮಶಾಲೆಯಲ್ಲಿ
ಒರಗಿರುತ್ತ ಲೊಂದು ಕನಸ ಕಂಡನೆಂತೆನೆ (ಭೋಗಷಟ್ಪದಿ)
(ಇದು ಮುಪ್ಪಿನ ಷಡಕ್ಷರಿಯದೆಂದೂ ಇದೆ.)

ಇವನ್ನೆಲ್ಲಾ ಪರಿಶೀಲಿಸುವಾಗ ಕನಕದಾಸರ ಕಾವ್ಯಗಳಲ್ಲಿ ಗೇಯ ಛಂದಸ್ಸು ತುಂಬಿ ಕೊಂಡಿರುವುದರಿಂದ ಇವನ್ನು ಹಾಡಲಿಕ್ಕಾಗಿಯೇ ಬರೆದುದೆಂಬುದು ನಿಶ್ಚಯವಾಗಿ ಕಾಣುತ್ತದೆ.

ಕನಕದಾಸರು ತನ್ನ ಕೃತಿಗಳಲ್ಲಿ 'ಆದಿಕೇಶವ' ಎಂಬ ಅಂಕಿತವನ್ನಿರಿಸಿದ್ದಾರೆ. ಆದರೆ ಈ ಅಂಕಿತ ಏಕರೂಪವಾಗಿಲ್ಲ.

1. ಕಾಗಿನೆಲೆಯಾದಿ ಕೇಶವ, ಸಿರಿಕಾಗಿನೆಲೆಯಾದಿ ಕೇಶವ
2. ಬಾಡದಾದಿ ಕೇಶವ, ಬಡದಾದಿ ಕೇಶವ
3. ದೇಲೂರ ಪುರವಾಸ ನೆಲೆಯಾದಿ ಕೇಶವ, ನೆಲೆಯಾದಿ ಕೇಶವ
4. ಕನಕದಾಸ ಎನ್ನೊಡೆಯಾದಿ ಕೇಶವ, ಆದಿಕೇಶವ
5. ಚೆನ್ನಕೇಶವ
6. ಸುರಪುರದ ನಿಲಯ ಚೆನ್ನಿಗರಾಯ

ಹೀಗೆ ಹಲವಾರು ವಿಧವಾಗಿ ಇವರ ಅಂಕಿತಗಳು ದೊರೆಯುತ್ತವೆ.

ದಾಸಸಾಹಿತ್ಯದಲ್ಲಿ ಸಂಗೀತವು ಗೌಣ -- ಸಾಹಿತ್ಯವೇ ಮುಖ್ಯ ಎನ್ನಲಾಗದು. ದಾಸಸಾಹಿತ್ಯವನ್ನು ಸುಮ್ಮನೆ ಓದಿದರೆ ಯಾವಭಾವವೂ ಸ್ಫುರಿಸಲಾರದು. ಕೆಲವೊಮ್ಮೆ ಸಪ್ಪೆ ಎನಿಸಲೂ ಬಹುದು. ದಾಸರ ಹಾಡುಗಳು ಸಂಗೀತದ ಕವಚ ತೊಟ್ಟ ಬಳಿಕವೇ ಭಾವವು ಸ್ಫುಟವಾಗಿ ಬಿಂಬಿಸುತ್ತದೆ. 'ಪಾಠ್ಯೇ ಗೇಯೇ ಚ ಮಧುರಂ' ಎಂಬ ರೀತಿಯ ಸಾಹಿತ್ಯವಿದಲ್ಲ. ಇದು ಕೇವಲ ಗೇಯ ಸಾಹಿತ್ಯ ಆದ್ದರಿಂದ ಮುಂದಿನ ವಾಗ್ಗೇಯ ಕಾರರ ಕೃತಿಗಳ ಪ್ರಧಾನ ಲಕ್ಷಣಗಳು ಬಹುಮಟ್ಟಿಗೆ ಇಲ್ಲೇ ಕಾಣಿಸಿಕೊಳ್ಳುತ್ತವೆ. ಅಧ್ಯಾತ್ಮ ಭಕ್ತಿ, ಧರ್ಮ, ಶೃಂಗಾರ, ನೀತಿ ಮುಂತಾದ ವಿಷಯಗಳು ಇಲ್ಲಿ ಎಷ್ಟು ಸರಳ ಗಂಭೀರವಾಗಿ ನಿರೂಪಿತವಾಗಿವೆಯೋ ಅಷ್ಟೇ ರಾಗ -- ಭಾವ -- ಲಯಗಳೂ ಪ್ರಮುಖ ಅಂಗಗಳಾಗಿಯೇ ಬಂದಿವೆ. ಯಾವುದೇ ಸಾಹಿತ್ಯ ಅದು ಹುಟ್ಟಿಕೊಂಡ ಪರಿಸರ, ವಿಧಾನ, ಮನೋಧರ್ಮ ಇವುಗಳಿಂದ ಅದರ ಸ್ವರೂಪವನ್ನು ನಿರ್ಣಯಿಸಲಾಗುತ್ತದೆ. ಎನ್ನುವುದಾದರೆ ದಾಸ ಸಾಹಿತ್ಯದ ಹುಟ್ಟುಗುಣವೇ ಹಾಡುವಶೈಲಿಯದು. ಇವರ ಮೌಲ್ಯ ನಿರ್ಣಯವು ಗಾನದ ತಳಹದಿಯ ಮೇಲೇ ಆಗಬೇಕಾಗುತ್ತದೆ. ಇವರಲ್ಲಿ ಬರುವ ರಾಗ -- ತಾಳಗಳು, ಛಂದೋಬಂಧ, ಶಬ್ದಾಲಂಕಾರಗಳು, ನಾದತರಂಗ, ಯಮಕ, ಯತಿ--- ಪ್ರಾಸಗಳು, ಪದಪುಂಜಗಳ ಪುನರಾವೃತ್ತಿ, ಪದಚ್ಛೇದ, ವಿಶ್ರಾಂತಿ, ಮುಖ್ಯ ವಿಷಯಗಳ ಮೇಲೆ ಬೀಳುವ ಸ್ವರಭಾರ ಇವೆಲ್ಲಾ ದಾಸಸಾಹಿತ್ಯವನ್ನು ಗೇಯ ಪ್ರಬಂಧದ ಚೌಕಟ್ಟಿನಲ್ಲಿ ತರುತ್ತವೆ.

ಗೇಯಕಾವ್ಯ ಹೆಚ್ಚಾಗಿ ವಾಚ್ಯಾರ್ಥದಲ್ಲೇ ವಿಶ್ರಾಂತವಾಗುತ್ತದೆ. ಉತ್ತಮ ಕಾವ್ಯದ ಲಕ್ಷಣವಾದ ವ್ಯಂಗ್ಯ ಅಥವಾ ಧ್ವನಿ ಇಲ್ಲಿ ಸಲ್ಲದು. ಧ್ವನಿ ಕಾವ್ಯದ ಕವಿ ವಾಚ್ಯವಿಮುಖನಾಗಿ ವ್ಯಂಗ್ಯವನ್ನು ಪುರಸ್ಕರಿಸಿದರೆ, ಗೇಯಕಾವ್ಯದ ಕವಿ ವ್ಯಂಗ್ಯವಿಮುಖನಾಗಿ ವಾಚ್ಯವನ್ನೇ ಪುರಸ್ಕರಿಸಬೇಕಾಗುತ್ತದೆ. ಆದುದರಿಂದಲೇ ಧ್ವನಿಕಾವ್ಯದಲ್ಲಿ ಸಲ್ಲದ ಪ್ರಾಸ, ಅನುಪ್ರಾಸ, ಯಮಕ, ಮುಂತಾದ ಶಬ್ದಾಲಂಕಾರಗಳು ಇಲ್ಲಿ ಬೆಲೆ ಬಾಳುತ್ತವೆ. ಅವಕ್ಕೇ ಇಲ್ಲಿ ಪ್ರಾಧಾನ್ಯ. ಗೇಯಕಾವ್ಯವನ್ನು ಹಾಡುವಾಗಲೇ ವಿವಿಧ ರಸಭಾವಗಳು ಸ್ಫುರಿಸುತ್ತವೆ. ಆ ರಸಭಾವಗಳೇ ವ್ಯಂಗ್ಯಗಳಲ್ಲವೆ? ಗೇಯ ಕಾವ್ಯಗಳು ಪರಿಣಾಮದಲ್ಲಿ

ಧ್ವನಿಕಾವ್ಯಗಳಂತೆಯೇ ಆದರೂ ಸ್ವರೂಪದಲ್ಲಿ ಅಲ್ಲ. ಆದುದರಿಂದಲೇ ವಾಗ್ಗೇಯಕಾರರ ಕೃತಿಗಳೂ ದಾಸರ ಹಾಡುಗಳೂ ವಿವಿಧ ಗಾಯಕರ ಹಾಡುಗಾರಿಕೆಯ ಸೊಗಸಿನ ಮೂಲಕ ಇಲ್ಲಿಯ ವರೆಗೂ ಉಳಿದು ಬಂದಿವೆ. ಇನ್ನೂ ಬಹುಕಾಲ ಜನರಿಗೆ ಜೀವರಸವನ್ನು ಒದಗಿಸ ಬಲ್ಲವು. ಈ ದೃಷ್ಟಿಯಿಂದಲೂ ನಾವು ದಾಸಸಾಹಿತ್ಯವನ್ನು ಪರಿಶೀಲಿಸಬೇಕಾಗುತ್ತದೆ.

ರಾಗಕ್ಕೆ ಭಾವವ್ಯಂಜಕ ಶಕ್ತಿ ಸ್ವಾಭಾವಿಕವಾಗಿ ಇದ್ದರೂ ಅದು ಅವ್ಯಕ್ತ, ಅಸ್ಫುಟ. ರಾಗಕ್ಕೆ ಶಬ್ದಸ್ಪರ್ಶವಾದಾಗಲೇ ಅದು ಮಿಂಚಿನಂತೆ ನಿರ್ದಿಷ್ಟವಾದ ಒಂದು ಭಾವವನ್ನು ಸ್ಪಂದಿಸುತ್ತದೆ ಎನ್ನುವುದು ಅನುಭವದ ಮಾತು. ಉತ್ತಮವಾದ ಕಾವ್ಯದ ಬಂಧ ಸೌಂದರ್ಯಕ್ಕೂ ಈ ಮಾತು ಸಲ್ಲುತ್ತದೆ.

ಅಪರ್ಯಾಲೋಚಿತೇಽಪ್ಯರ್ಥೇ ಬಂಧಸೌಂದರ್ಯಸಂಪದಾ
ಗೀತವತ್ ಹೃದಯಾಹ್ಲಾದಂ ತದ್ವಿದಾಂ ವಿದಧಾತಿಯತ್
-ಕುಂತಕ.

ದಾಸಸಾಹಿತ್ಯದಲ್ಲಿ ಬಂಧ ಸೌಂದರ್ಯವೂ ರಾಗಸ್ಪಂದನವೂ ಬೆಸುಗೆ ಗೊಂಡಿರುವುದರಿಂದ ಎರಡರ ವಿವೇಚನೆಯೂ ಇಲ್ಲಿ ಪ್ರಸ್ತುತವಾಗುತ್ತದೆ.

ಕನಕದಾಸರ ಅನೇಕ ಹಾಡುಗಳು ಬಂಧಸೌಂದರ್ಯದಿಂದ, ಲಯದ ತರಂಗಿತತೆಯಿಂದ ತುಂಬ ಸೊಗಸಾಗಿವೆ. ಅವು ಅಂದಿನಿಂದಲೂ ಜನರ ಬಾಯಲ್ಲಿ, ಸಂಗೀತಗಾರರ ಹಾಡುಗಾರಿಕೆಯಲ್ಲಿ ನವೋನವವಾಗಿ ನಲಿಯುತ್ತ ಬಂದಿವೆ. ಅವುಗಳಲ್ಲಿ ಕೆಲವು-

1. ತಲ್ಲಣಿಸದಿರು ಕಂಡ್ಯ ತಾಳು ಮನವೆ
2. ನೀ ಮಾಯೆಯೊಳಗೊ ನಿನ್ನೊಳು ಮಾಯೆಯೋ
3. ತನು ನಿನ್ನದು ಜೀವನ ನಿನ್ನದು
4. ಬಾಗಿಲನು ತೆರೆದು ಸೇವೆಯನು ಕೊಡು ಹರಿಯೇ
5. ಏನೆಂದು ಕೊಂಡಾಡಿ ಸ್ತುತಿಸಲಿ ದೇವಾ
6. ಏನು ಇಲ್ಲದ ಎರಡು ದಿನದ ಸಂಸಾರ
7. ಪಥ ನಡೆಯದಯ್ಯ ಪರಲೋಕಸಾಧನಕೆ
8. ಅರಸಿನಂತೆ ಬಂಟನೋ

ಹೀಗೆ ಈ ಪಟ್ಟಿಯನ್ನು ಬೆಳೆಸಬಹುದು. ದಾಸರ ಹಾಡುಗಳ ಪಲ್ಲವಿ -- ಆರಂಭದ ಸಾಲುಗಳು ಒಂದು ಅನುಭವದ ಸಾರಾಂಶ: ಇದರ ಉತ್ತಮವಾದ ಸಾಲುಗಳು

ಸಾಹಿತ್ಯದ ಮೇಲ್ಮಟ್ಟದ ಮಾತಾಗಿ ನಿಲ್ಲಬಲ್ಲವು. ಪುರಂದರ ದಾಸರ ಹಾಡುಗಳ ಪಲ್ಲವಿ, ಕೆಲವು ತೀರ ಸೊಗಸಾಗಿದ್ದು ಅವು ಕನಕದಾಸರ ಹಾಡುಗಳಲ್ಲೂ ಬಂದಿವೆ. ಆದರೆ ಹಾಡು ಬೇರೆ ಬೇರೆ. ಅವುಗಳಲ್ಲಿ ಪುರಂದರದಾಸರ ಗೇಯತೆಯ ಸೊಗಸು ಹೆಚ್ಚಿನದು. ಉದಾ--

ಎಲ್ಲರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ಪ

ಸಿರಿ ವಲ್ಲಭನ ಭಜಿಸುವುದು ಮುಕ್ತಿಗಾಗಿ ಅ.ಪ

ಪಲ್ಲಕ್ಕಿಯ ಹೊರುವುದು ಹೊಟ್ಟೆಗಾಗಿ ದೊಡ್ಡ
ಮಲ್ಲ ರೊಡನಾಡುವುದು ಹೊಟ್ಟೆಗಾಗಿ
ಸುಳ್ಳಾಗಿ ಹೊಗಳುವುದು ಹೊಟ್ಟೆಗಾಗಿ ಸಿರಿ
ವಲ್ಲಭನ ಧ್ಯಾನವು ಮುಕ್ತಿಗಾಗಿ ೧

-ಪುರಂದರದಾಸ

ಎಲ್ಲರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ಪ

ನೆಲ್ಲುಗಳ ಕುಟ್ಟಿಕೊಂಡು ಬಿದುರುಗಳ ಹೊತ್ತುಕೊಂಡು
ಕೂಲಿಗಳ ಮಾಡುವುದು ಹೊಟ್ಟೆಗಾಗಿ ೧

-ಕನಕದಾಸ

ಹೂವ ತರುವರ ಮನೆಗೆ ಹುಲ್ಲ ತರುವ
ಅವ್ವ ಲಕುಮಿರಮಣ ಇವಗಿಲ್ಲ ಗರುವ ಪ

ಒಂದುದಳ ಶ್ರೀತುಲಸಿ ಬಿಂದು ಗಂಗೋದಕ
ಇಂದಿರಾ ರಮಣಗೆ ಅರ್ಪಿತ ವೆನ್ನಲು
ಒಂದೆ ಮನದಲಿ ಸಿಂಧುಶಯನ ಮುಕುಂದ ಎನೆ
ಎಂದೆಂದು ವಾಸಿಪನಾ ಮಂದಿರದೊಳಗೆ ೧

-ಪುರಂದರದಾಸ

ಹೂವ ತರುವರ ಮನೆಗೆ ಹುಲ್ಲತರುವ
ಆವ ಬಗೆಯಲಿ ಸಲಹೊ ದೇವ ಚೆನ್ನಯನೆ ಪ

ರಂಗನಾಥ ನಿನ್ನಂಘ್ರಿಗೆರಗುವೆನೊ
ಅಂಗವನು ನಿನಗೆ ನಾ ಸಲಿಸುವೆನು
ರಂಗರೂಪವ ತೋರಿ ಭಂಗಭವಗಳನಳಿದು
ಡಂಗುರವ ಹೊಯ್ಯೋ ನಿನ್ನ ಡಿಂಗರಿಗನೆಂದು ೧

ಊರಿಗೆ ಬಂದರೆ ದಾಸಯ್ಯ ನಮ್ಮ
ಕೇರಿಗೆ ಬಾ ಕಂಡ್ಯ ದಾಸಯ್ಯ ಪ

ಕೊರಳೊಳು ವನಮಾಲೆ ಧರಿಸಿದನೆ ಕಿರು ಬೆರಳಲಿ ಬೆಟ್ಟವ ನೆತ್ತಿದನೆ
ಇರುಳು ಹಗಲು ನಿನ್ನ ಕಾಣದೆ ಇರಲಾರೆ
ಮರುಳು ಮಾಡಿದಂಥ ದಾಸಯ್ಯ ೧

-ಪುರಂದರದಾಸ

ಊರಿಗೆ ಬಂದರೆ ದಾಸಯ್ಯ ನಮ್ಮ ಕೇರಿಗೆ ಬಾಕಂಡ್ಯ ದಾಸಯ್ಯ ಪ

ಕೋಲು ಕೊಳಲು ಕೈಲಿ ದಾಸಯ್ಯ ಕಲ್ಲಿಗೆ ವರವಿತ್ತೆ ದಾಸಯ್ಯ
ಮಲ್ಲನ ಮರ್ದಿಸಿ ಮಾವನ ಮಾಡುಹಿದೆ
ನೀಲ ಮೇಘಶ್ಯಾಮ ದಾಸಯ್ಯ ೧

-ಕನಕದಾಸ

ಮೇಲಿನ ಉದಾಹರಣೆಗಳಿಂದ ಕನಕದಾಸರ ಮನೋಧರ್ಮ ಎಂತಹುದೆಂಬುದು ಸ್ವಲ್ಪ ಮಟ್ಟಿಗೆ ಅರ್ಥವಾಗಬಹುದು. ಪುರಂದರ ದಾಸರು ನಾರದನ ಅವತಾರ ಎಂಬ ಮಾತು ಹೇಗೂ ಇರಲಿ. ಗೇಯತೆಯ ದೃಷ್ಟಿಯಿಂದ ಅದನ್ನು ಒಪ್ಪಿಕೊಳ್ಳದೇಕಾಗುತ್ತದೆ. ಕನಕದಾಸರು ಯಮಧರ್ಮನ ಅವತಾರವೆಂದು ಅವರ ಒಂದು ಉಗಾಭೋಗದಲ್ಲೇ ಕಾಣುತ್ತದೆ.

ಯಮನು ಮುನ್ನೆ ಮಾಂಡವ್ಯ ಶಾಪದಿಂದೆರಡು ಜ--
ನುಮ ಶೂದ್ರ ಯೋನಿಯೊಳಗೆ ಪುಟ್ಟಿದನು ಮೊದಲ ಜ--
ನುಮ ವಿದುರನಾಗಿ ಕುರುಬರ ಕುಲದಲ್ಲಿ ಜನಿಸಿದೆನಗೀ ಜ--
ನುಮದಲ್ಲಿ ಮುಕ್ತಿ ಎಂತು ಎಂಬೆ

-ಕನಕದಾಸ

ವಿದುರ ಭಾಗವತೋತ್ತಮ. ಯಮನೂ ಅಷ್ಟೆ. ಅವರ ಅಂಶ ಸಂಭೂತರೆಂದಾಗ ಕನಕದಾಸರೂ ಭಾಗವತೋತ್ತಮರು ಎಂದು ಮಾತ್ರ ಇಲ್ಲಿ ತೆಗೆದುಕೊಳ್ಳಬೇಕು. ಆದರು ಈ ಹಾಡುಗಳನ್ನು ಪದಗರ್ಭ ಕೆಡದಂತೆ ಹಾಡಿದರೆ, ಗೇಯತೆಗೆ ಭಂಗಬರಲಾರದೆಂದು ಅನಿಸುತ್ತದೆ.

ಕೆಲವು ಹಾಡುಗಳಲ್ಲಿ ಅವರ ಮಾತುಗಳು ತುಂಬ ಹರಿತವಾಗಿದ್ದು ಎಚ್ಚರಿಕೆಯನ್ನು ನೀಡುವಂತಿವೆ--

1. ತೀರ್ಥವನು ಪಿಡಿದವರು ತಿರುನಾಮಧಾರಿಗಳೆ?

2. ಬಾಯಿನಾರಿದ ಮೇಲೆ ಏಕಾಂತವೆ?

3. ಕುಲ ಕುಲ ಕುಲ ಕುಲವೆನ್ನುತಿಹರಯ್ಯ.

ಅವರ ಇಂತಹ ಕೆಲವು ಸರಳವಾದ ಪದ್ಯಗಳು ಗೇಯತೆಗೆ ಒಗ್ಗಿಕೊಂಡ ಹಾಗೆ, ವಕ್ರವಾದ ಮಾತುಗಳು ಚುಚ್ಚುತ್ತವೆ ಹೊರತು ಗೇಯತೆಗೆ ಅಷ್ಟಾಗಿ ಹೊಂದಿಕೊಳ್ಳು-ವುದಿಲ್ಲ. ಅದರ ಗಾನಕ್ರಮವೂ ಅಷ್ಟೇ ವಕ್ರವಾಗಿದ್ದರೆ ಹೊಂದಿಕೊಳ್ಳಬಹುದು ಅಷ್ಟೆ. ಉದಾ--

ರಾಗ--ಕಾಂಬೋದಿ -- ಝಂಪೆತಾಳ

ಸ-ಹಜವಿದು ಈ ನುಡಿಯು ಸ-ಟಿಯ ಮಾತಲ್ಲ ಪ

ಮಹಿ-ಯೊಳಗೆ ಪೇಳುವೆನು ವಿಹಿತ - ವಾಕ್ಯಗಳ ಅ.ಪ

ಶ್ರುತಿಶಾಸ್ತ್ರ ಪುರಾಣ ಗಳನೋದುವನೆ ಶೂದ್ರ
ಅತಿ-ಥಿಯಾದರಿಸುವನೆ ಅತಿಲುಬ್ಧನು
ಪ್ರತಿನಿತ್ಯ ಸಂಧ್ಯಾನ ಮಾ-ಡುವವನೇ
ಪಾಪಿ ಪತಿಯಾಜ್ಞೆಯಿಂದಿಹಳೆ ಪರಮ ಪಾತಕೆಯು ೧

ಈ ಪದ್ಯ ಬಂಧದ ದೃಷ್ಟಿಯಿಂದ ಸುಂದರವಾಗಿದೆ. ಸಹಜವಾಣಿ ಪ್ರಾಸಗಳು ಬಂದಿವೆ. ಮೊದಲನೆಯ ಸಾಲಿನಲ್ಲಿ ಯತಿಸ್ಥಾನದಲ್ಲಿರುವ ಸಕಾರ ತಾಳದ ಮೂರನೇ ಆವರ್ತದ ಪ್ರಾರಂಭದಲ್ಲೂ ಇದ್ದು ತಾಳದ ಒತ್ತನ್ನು ತೋರಿಸುತ್ತದೆ. ಎರಡನೇ ಸಾಲಿನಲ್ಲಿ ಯತಿಯ ಬದಲಿಗೆ ಪ್ರಾಸವೇ ಇದ್ದು, ಅದು ತಾಳದ ಮೂರನೇ ಆವರ್ತದ ಪ್ರಾರಂಭ-ದಲ್ಲಿ ಪುನರಾವರ್ತನೆ ಹೊಂದಿ 'ಪ್ರಾಸಯತಿ' ಯಾಗಿದೆ. ಚರಣದ ಮೊದಲ ಪಾದ-ದಲ್ಲಿ ಯತಿಯಿಲ್ಲ. ಅದು ದೋಷವಲ್ಲ. ಉಳಿದ ಮೂರು ಪಾದಗಳಲ್ಲಿ ಯತಿಯ ಸ್ಥಾನ ಚೆನ್ನಾಗಿದೆ. ಎರಡನೇ ಪಾದದಲ್ಲಿ ಅತಿ -- ಅತಿ, ಮೂರನೇ ಸಾಲಿನಲ್ಲಿ ಪ್ರ--ಮಾ (ಯತಿಯು ಸವರ್ಣಾಕ್ಷರದಲ್ಲೂ ಬರುತ್ತದೆ) ನಾಲ್ಕನೇ ಸಾಲಿನಲ್ಲಿ ಪ--ಪ ಹೀಗೆಯತಿ-ಸ್ಥಾನಗಳು ನಿರ್ದಿಷ್ಟವಾಗಿವೆ, ಪದ ಬಂಧವು ಸರಲವಾಗಿದೆ. ಆದರೂ ಈ ಪದ್ಯ ಎರಡು ಅರ್ಥವನ್ನು ಗರ್ಭಿಸಿಕೊಂಡಿದೆ. ಶ್ರುತಿಶಾಸ್ತ್ರಪುರಾಣಗಳನ್ನು ಓದುವವನೇ ಶೂದ್ರ ಎಂದು ಮೊದಲ ಅರ್ಥವಾದರೆ, ಅದನ್ನೇ ಪ್ರಶ್ನೆಯಾಗಿ (ಕಾಕು) ತೆಗೆದುಕೊಂಡರೆ ಶೂದ್ರ ಶ್ರುತಿ-ಶಾಸ್ತ್ರ ಪುರಾಣಗಳನ್ನು ಓದುವನೆ? ಇಲ್ಲ; ಎಂಬ ಅರ್ಥವಾಗದೇಕು. ಇಂತಹ ಕಡೆ, ರಾಗದಿಂದಲೇ ಭಾವವನ್ನು ವ್ಯಂಜಿಸುವಾಗ ರಾಗದ ಪಲುಕು ಬೇರಾಗಬೇಕಲ್ಲವೆ?

ಆಗ ರಾಗದಿಂದ ಬರುವ ಭಾವವ್ಯಂಗಕ್ಕಿಂತಲೂ ವಾಚ್ಯವೇ ಚಾರುತ್ವ ಪಡೆಯುವುದಿಲ್ಲವೆ? ಇದು ಒಂದು ರೀತಿಯ ಕೊಂಕುನುಡಿ ಯಾಗಿಯೇ ಪರಿಣಮಿಸುವುದು.

ಇದು ಶ್ಲೇಷದಲ್ಲಿ ಬಂದರೆ ಅಂತಹ ತೊಡಕಿರಲಾರದು. ಕನಕದಾಸರ ಇನ್ನೊಂದು ಪದ್ಯ ನೋಡಿ--

ರಾಗ -- ಮಾಂಡ್ -- ಆದಿತಾಳ

ಪರಮಪುರುಷ ನೀನೆಲ್ಲಿ ಕಾಯಿ
ಸರಸಿ ಯೊಳಗೆ ಕರಿ ಕೂಗಿರೆ ಕಾಯಿ ಪ

ಹಿರಿದು ಮಾಡಿದ ಪಾಪ ನುಗ್ಗೆಕಾಯಿ
ಹರಿ ನಿನ್ನ ಧ್ಯಾನ ಬಾಳೆಕಾಯಿ
ಕರಿರಾಜ ಗೊಲಿದಂಥ ಬದನೆಕಾಯಿ
ಅರಿಷಡ್ವರ್ಗದಿ ಒದಗಿಲಿ ಕಾಯಿ ೧

ಹೇ ಪುರುಷೋತ್ತಮ! ನೀನು ನೆಲಿಕಾಯಿ, ಎಂಬ ಅರ್ಥ ಸಂಗತವಾಗದಿರುವುದರಿಂದ, ಬುದ್ಧಿ ಬೇರೊಂದು ಅರ್ಥವನ್ನು ಅರಸುತ್ತದೆ. ಮುಂದಿನ ಸಾಲಿನ ಎಲ್ಲವನ್ನೂ ಪರಿಶೀಲಿಸುತ್ತ ಹೋದಂತೆ ಬೇರೊಂದು ಅರ್ಥ ಆಪದಬಂಧದಲ್ಲಿ ಅಡಕವಾಗಿರುವುದು ಗೋಚರಿಸುತ್ತದೆ. ಆಗ ಹೇ ಪುರುಷೋತ್ತಮ ! ನೀನು ಎಲ್ಲಿಯೂ ಕಾಯಿ (ರಕ್ಷಿಸು) ಎಂಬ ಅರ್ಥ ಹೊಳೆದಾಗ ಮುಂದಿನ ಎಲ್ಲ ಸಾಲುಗಳಿಗೂ ಹೀಗೆ ಬೇರೆ ಬೇರೆ ಅರ್ಥವನ್ನು ಮಾಡಬೇಕಾಗುತ್ತದೆ. ಆನೆಯು ಕೂಗಲು ರಕ್ಷಿಸು, ರಕ್ಷಿಸಿದೆ ಇದೇ ರೀತಿ ಪಾಪ ನುಗ್ಗಾಗುವಂತೆ ರಕ್ಷಿಸು. ಹೀಗೆ ಅರ್ಥದ್ವಯವನ್ನು ಕಲ್ಪಿಸಬೇಕು. ಹೀಗಿದ್ದರೂ ಗೇಯತೆಯ ದೃಷ್ಟಿಯಿಂದ ಇದು ತೊಡಕಾಗುವುದಿಲ್ಲ. ಮಾತು ಸರಲವಾಗಿ ರಾಗದ ಸ್ವರಗಳಲ್ಲಿ ತೂಗುತ್ತಾ ಹೋಗುವುದರಿಂದ ಭಾವವು ಸ್ಫುಟ ವಾಗಿಯೇ ಸ್ಪಂದಿಸುವ ಅನುಭವವಾಗುತ್ತದೆ.

ಒಮ್ಮೆ ಕನಕದಾಸರಿಗೆ ಶೂದ್ರರ ಉತ್ಸವದಲ್ಲಿ ಭಾಗವಹಿಸುವ ಸಂದರ್ಭವೊದಗಿತು. ಆಗ ಜಾನಪದ ಭಾಷೆಯಲ್ಲೆ, ಅವರು ಹಾಡನ್ನು ಬರೆದಿದ್ದಾರೆ. ಅದು ದಶಾವತಾರಸ್ತುತಿರೂಪವಾಗಿದೆ.

ರಾಗ -- ನಾದನಾಮಕ್ರಿಯೆ --- ಚಾಪುತಾಳ

ದೇವಿ ನಮ್ಮ‌ದ್ಯಾವರು ಬಂದರು ಬನ್ನಿರೆ ನೋಡ ಬನ್ನಿರೆ ಪ

ಕೆಂಗಣ್ಣ ಮೀನನಾಗಿ ನಮ್ಮ ರಂಗ
ಗುಂಗಾಡಿ ಸೋಮನ ಕೊಂದಾನ್ಮಾ

ಗುಂಗಾಡಿ ಸೋಮನ ಕೊಂದು
ವೇದವ ಬಂಗಾರದೊಡಲಿನಿಗಿತ್ತಾನ್ಮಾ ೧

ದೊಡ್ಡ ಮಡುವಿನೊಳಗೆ ನಮ್ಮರಂಗ
ಗುಡ್ಡವ ಹೊತ್ತುಕೊಂಡು ನಿಂತಾನ್ಮಾ
ಗುಡ್ಡವ ಹೊತ್ತುಕೊಂಡು ನಿಂತು
ಸುರರನು ದೊಡ್ಡವರನ್ನ ಮಾಡ್ಯಾನ್ಮಾ ೨

ಚಿನ್ನ ಕಾಡಿನ ಹಂದಿಯಾಗಿ ನಮ್ಮರಂಗ
ಚಿನ್ನದ ಕಣ್ಣನ ಕೊಂದಾನ್ಮಾ
ಚಿನ್ನದ ಕಣ್ಣನಕೊಂದು ಭೂಮಿಯ
ವನ್ನಜಸಂಭವಗಿತ್ತಾನ್ಮಾ ೩

ಸಿಟ್ಟಿಲಿ ಸಿಂಹನಾಗಿ ನಮ್ಮರಂಗ
ಹೊಟ್ಟೆಯ ಕರುಳ ಬಗಿದಾನ್ಮಾ
ಹೊಟ್ಟೆಯ ಕರುಳ ಬಗಿದು ನಮ್ಮರಂಗ
ಪುಟ್ಟಗೆ ವರವ ಕೊಟ್ಟಾನ್ಮಾ ೪

ಹುಡುಗ ಹಾರುವನಾಗಿ ನಮ್ಮರಂಗ
ಬೆಡಗಿಲಿ ಮುಗಿಲಿಗೆ ಬೆಳೆದಾನ್ಮಾ
ಬೆಡಗಿಲಿ ಮುಗಿಲಿಗೆ ಬೆಳೆದು ಬಲಿಯನು
ಅಡಿಯಿಂದ ಪಾತಾಳ ಕೊತ್ತಾನ್ಮಾ ೫

ತಾಯಮಾತನು ಕೇಳಿ ಸಾವಿರತೋಳಿನ
ಆವಿನ ಕಳ್ಳನ ಕೊಂದಾನ್ಮಾ
ಆವಿನ ಕಳ್ಳನ ಕೊಂದು ಭೂಮಿಯ
ಅವನಿಯ ಸುರರಿಗಿತ್ತಾನ್ಮಾ ೬

ಪಿಂಗಳ ಕಣ್ಣಿನ ಕೊಂಗಗಳನು ಕೂಡಿ
ಭಂಗನೆ ಲಂಕೆಗೆ ಪೊದಾನ್ಮಾ
ಭಂಗನೆ ಲಂಕೆಗೆ ಪೋಗಿ ನಮ್ಮರಂಗ
ಹೆಂಗಸುಗಳ್ಳನ ಕೊಂದಾನ್ಮಾ ೭

ಕರಿಯ ಹೊಳೆಯಲಿ ತುರುಗಳ ಕಾಯುತ
ಉರಗನ ಮಡುವ ಧುಮುಕ್ಯಾನ್ಮಾ

ಉರಗನ ಹೆಡೆಮೇಲೆ ಹಾರ್ಹಾರಿ ಕುಣಿವಾಗ
ವರವ ನಾರಿಯರಿಗೆ ಕೊಟ್ವಾನ್ಮ್ಯಾ ೮

ಕಂಡ ಕಂಡ್ಲ್ಲಿ ಕುಂಡೆಯ ಬಿಟ್ಟುಕೊಂಡು
ಭಂಡತನದಲಿ ನಿಂತಾನ್ಮ್ಯಾ
ಭಂಡತನದಲಿ ನಿಂತು ತ್ರಿಪುರರ
ಹೆಂಡಿರನೆಲ್ಲ ಕೆಡಿಸ್ಯಾನ್ಮ್ಯಾ ೯

ಚೆಲ್ವ ಹೆಂಡತಿಯ ಕುದುರೆಯ ಮಾಡಿ
ಒಳ್ಳೆಯ ರಾವುತನಾದಾನ್ಮ್ಯಾ
ಒಳ್ಳೆಯ ರಾವುತನಾಗಿ ಮ್ಲೇಚ್ಛರ
ಡೊಳ್ಳಹೊಟ್ಟೆಯ ಮೇಲೆ ಒದ್ದಾನ್ಮ್ಯಾ ೧೦

ಡೊಳ್ಳಿನ ಮೇಲ್ ಕೈಯ ಭರಮಪ್ಪಹಾಕ್ಯಾನು
ತಾಳವ ಶಿವನಪ್ಪ ತಟ್ಟ್ಯಾನ್ಮ್ಯಾ
ಒಳ್ಳೊಳ್ಳೆ ಪದಗಳ ಹನುಮಪ್ಪಹಾಡ್ಯಾನು
ಚೆಲುವ ಕನಕಪ್ಪ ಕುಣಿದಾನ್ಮ್ಯಾ ೧೧

ಇಲ್ಲಿನ ಜಾನಪದ ಭಾಷೆ ಗೇಯತೆಗೆ ತುಂಬ ಅನುವು ಮಾಡಿಕೊಟ್ಟಿದೆ. ಸಂಸ್ಕೃತ ಪದಗಳನ್ನು ಜಾನಪದ ಕನ್ನಡ ನುಡಿಗೆ ಹೊಂದಿಸಿಕೊಂಡ ರೀತಿ ತುಂಬ ಸೊಗಸಾಗಿದೆ. (ಬಂಗಾರ ದೊಡಲ = ಹಿರಣ್ಯಗರ್ಭ, ಚಿನ್ನದ ಕಣ್ಣ = ಹಿರಣ್ಯಾಕ್ಷ ಭರಮ =ಬ್ರಹ್ಮ) ಬುದ್ಧಾವತಾರದ ವರ್ಣನೆಯಲ್ಲಿ ಬಿಚ್ಚುನುಡಿಯಮಾತು ಚಿತ್ರವನ್ನು ಕಣ್ಣೆದುರಿಗೆ ನಿಲ್ಲಿಸುತ್ತದೆ. ಪ್ರತಿಚರಣದ ಎರಡನೆಯ ಪಾದ ಮೂರನೆಯ ಪಾದದಲ್ಲಿ ಪುನರಾವರ್ತನೆಹೊಂದಿ, ಗೇಯತೆಗೆ ಇಂಬುಗೊಡುತ್ತದೆ. ಇಲ್ಲಿ ಚರಣದ ಕೊನೆಯಲ್ಲಿ ಬರುವ 'ಮ್ಯಾ' ಎಂಬುದು ಭಾಂಡೀರ ಭಾಷೆಯ ಕುರುಹೆಂದು ಕಾಣುತ್ತದೆ. ಪುರಂದರ ದಾಸರ ಹಾಡುಗಳಲ್ಲೂ ಕೆಲವೆಡೆ ಇದು ಕಾಣುತ್ತದೆ. ಭಾಂಡೀರಭಾಷೆಯಲ್ಲಿ ಮಾತುವಿನ ಜೊತೆಗೆ ಇಯ, ಅಯ್ಯ, ಆರೇ, ಮ್ಯಾ ಮುಂತಾದ ಸ್ತೋಭಗಳು ಸಾಮಾನ್ಯವಾಗಿ ಬರುತ್ತವೆ.

ಇಂತಹ ಅನೇಕ ಕೀರ್ತನೆಗಳು ತುಂಬ ಜನಪ್ರಿಯವಾಗಿ ಬಂದಿವೆ. ಸಂಗೀತ ಶಾಸ್ತ್ರಕ್ಕಾಗಿ ಕನಕದಾಸರ ವಿಶಿಷ್ಟವಾದ ಕೊಡುಗೆ ಏನು ಎಂಬುದಕ್ಕೆ ಖಚಿತವಾಗಿ ಏನೂ ಹೇಳುವಂತಿಲ್ಲ. ಎಷ್ಟೋ ವೇಳೆ ಪುರಂದರ ದಾಸರ ಹಾಡಿನ ಭಾವಾನುವಾದವೇ ಕನಕದಾಸರ ಕೃತಿಗಳಲ್ಲಿ ಬರುವುದುಂಟು. ಆಗ ಅಲ್ಲಿನ ಗೇಯತೆ ಇಲ್ಲಿ ಬರುವುದಿಲ್ಲ. ಉದಾ

ರಾಗ -- ಕಾಂಬೋದಿ -- ಚಾಪುತಾಳ

ಹೇಗೆ ಮೆಚ್ಚಿಸಲಿ ಅರ್ಚಿಸಲಿ ನಿನ್ನ
ನಾಗಶಯನ ನಾರದ ವಂದ್ಯನೆ ದೇವ ಪ

ಮಂಗಳಾಭಿಷೇಕಕೆ ಉದಕ ತರುವೆನೆನೆ
ಗಂಗೆಯುಂಗುಟದಿ ಪಡೆದಿರುವೆ
ಸಂಗೀತ ಕೀರ್ತನೆ ಪಾಡುವೆ ನೆಂದರೆ
ತುಂಬುರು ನಾರದರು ಪಾಡುತಿಹರೋ ದೇವ ೧

-ಪುರಂದರದಾಸ

ರಾಗ -- ಕಾಂಭೋಜಿ -- ಝುಂಪೆತಾಳ

ಆವಪರಿಯಲಿ ನಿನ್ನ ನೊಲಿಸಿ ಮೆಚ್ಚಿಪ ವಿಧವು
ಅಣುಮಾತ್ರ ತೋರದಲ್ಲ ಪ

ದೇವ ದೇವೇಶ ನೀನೆಂದು ನಂಬಿರಲು ಕೈ
ಪಾವ ಲೋಕನದಿ ಸಲಹೋ -- ದೇವ ಅ.ಪ

ಫಣಿರಾಜನಾಸನದಿ ಮಲಗಿದವಗೆ
ಅರಿವೆಯಾಸನವೆಂತು ನಾಹಾಸಲಿ
ಘನವಾದ ಗಂಗೆಯನು ಪಡೆದವಗೆ ಕಲಶ ನೀ
ರೆನದೆಂತು ಮೈಗೆರೆಯಲಿ
ತನುವಿನಾ ಪರಿಮಳವು ಗಮಗಮಿಪನಿಗೆ ಸುಚಂ--
ದನವೆಂತು ನಾ ಪೂಸಲಿ
ಅನವರತ ನಾಭಿಯೊಳು ಶತಪತ್ರವಿಹಗೆ ಮಿ--
ಕ್ಕಿನ ಪೂವ ಮುಡಿಸಲೆಂತೈ ೧

-ಕನಕದಾಸ

ಕನಕದಾಸರ ಶೈಲಿ ತುಲನಾತ್ಮಕವಾಗಿ ಜಟಿಲ ವೆಂದೇ ಹೇಳಬೇಕು. ಆದರೂ ಕೆಲವೆಡೆ ಅವರ ಪದ್ಯಗಳು ಭಾವಬಂಧುರವಾಗಿರುವುದರಿಂದ-- ಅಂದರೆ ರಾಗದ ಧಾತುವಿನೊಂದಿಗೆ ಸಾಹಿತ್ಯದ ಮಾತು ಹದವಾಗಿ ಬೆರೆತುಕೊಂಡಿರುವುದರಿಂದ -- ಅಂತಹವು ಇಂದಿಗೂ ಜನಪ್ರಿಯವಾಗಿ ಉಳಿದುಕೊಂಡಿವೆ. ದಾಸಸಾಹಿತ್ಯದಲ್ಲಿ ಹಾಡು-ಗಳ ಪಲ್ಲವಿ -- ಸಾರವತ್ತಾದ ಕೇಂದ್ರ ಬಿಂದು, ಅದೇ ತಿರುಳು. ಕನಕದಾಸರ ಹಾಡುಗಳ ಪಲ್ಲವಿ ತುಂಬ ಚುರುಕು, ಸೊಗಸು, ಹರಿತ. ಮೈಯನ್ನು ಚಿವುಟಿ ಎಚ್ಚರಗೊಳಿಸುವಂ

ತಹ ಸತ್ವವುಳ್ಳವು. ಯಾವ ಸನ್ನಿವೇಶದಲ್ಲಿ ಹಾಡು ಹುಟ್ಟಿಬಂದಿದೆ, ಅದರ ಕೇಂದ್ರಭಾವ ಯಾವುದು, ಪರಿಣಾಮ ಎಂಥದು ಎಂಬ ಎಲ್ಲವನ್ನೂ ಪಲ್ಲವಿಯು ತಟ್ಟನೆ, ಮನಸ್ಸಿನ ಮೇಲೆ ಹೊಳೆಯಿಸುತ್ತದೆ. ಅನು ಪಲ್ಲವಿಯು ಪಲ್ಲವಿಯದೇ ಒಂದು ತುಂಡು ಅಥವಾ ಅವಶೇಷ ಉತ್ತರಾರ್ಧ ಎಂದರೂ ಸಲ್ಲುವುದು. ಚರಣಗಳಲ್ಲಿ -- ಪುರಾಣಕತೆಗಳ ಸನ್ನಿ-ವೇಶಗಳು, ಲೋಕೋಕ್ತಿ, ಗಾದೆ, ನೀತಿ ಮುಂತಾದ ವಿವರಗಳಿಂದ ನೆಯ್ದ ಉದಾಹರ-ಣೆಗಳು ಮಾತ್ರವಾಗಿದ್ದರೂ ಒಂದೊಂದು ಚರಣವೂ ಪ್ರತ್ಯೇಕವಾದ ರಮ್ಯತೆಯುಳ್ಳದು. ಗೇಯತೆಯೇ ಇದರ ಮುಖ್ಯ ಅಂಶವಾಗಿರುವುದರಿಂದ ಪೌನರುಕ್ತ ದೋಷಗಳು ಇಲ್ಲಿ ಗಣ್ಯವಲ್ಲ. ಕಾವ್ಯದೋಷಗಳೂ ಇಲ್ಲಿ ಲೆಕ್ಕಕ್ಕೆ ಬಾರವು. ಸಾಹಿತ್ಯದ ಪದಗಳು ರಾಗದ ಮಾಧ್ಯಮದಲ್ಲಿ ಸರಿಯುತ್ತಿದ್ದ ಹಾಗೆ ಭಾವಗಳು ಎಳೆಎಳೆಯಾಗಿ ಹೃದಯದಲ್ಲಿ ಮಿಡಿ-ಯುವ ಅನುಭವವಾಗುವುದೇ ಮುಖ್ಯ.

ಕನಕದಾಸರ ಕೀರ್ತನೆಗಳಲ್ಲಿ ಕೃಷ್ಣನ ವಿಲಾಸಜೀವನಕ್ಕೆ ಸಂಬಂಧಿಸಿದ ಹಾಡು-ಗಳು ಕಡಿಮೆ. ಅಧ್ಯಾತ್ಮ ಲೋಕನೀತಿಗೆ ಸಂಬಂಧಿಸಿದವು ವಿಪುಲವಾಗಿವೆ. ದಾಸರ ರಚನೆಗಳಲ್ಲಿ ನಿಂದಾಸ್ತುತಿರೂಪದವೂ ಇವೆ. ಕನಕದಾಸರ ಕೀರ್ತನೆಗಳಲ್ಲಿ ಒಗಟಿನಂತ-ಹವು ಹೇರಳವಾಗಿವೆ. ಇವುಗಳಿಗೆ ಮುಂಡಿಗೆಗಳೆಂದು ಹೆಸರು. ಕೆಲವು ಕೀರ್ತನೆಗಳಲ್ಲಿ 'ಕನಕನಾಡಿದ ಗುಟ್ಟು ಆದಿಕೇಶವ ಬಲ್ಲ' ಎಂದು ಹೇಳುವಷ್ಟು ತತ್ವಗಳು ನಿಗೂಢವಾ-ಗಿವೆ.

ಬಲ್ಲವರು ನೀವು ಪೇಳಿರಯ್ಯ
ಭಾವದು ಭಯಾರ್ಥವಿದು ಎಲ್ಲರಿಗೆ ಸಮ್ಮತವಾದುದೀ ನಾಮ

ಎಂದು ಅವರು ಜಾಣರಿಗೆ ಪಂಥಾಹ್ವಾನವನ್ನು ಒಡ್ಡುತ್ತಾರೆ. ಇಂತಹ ಕೀರ್ತನೆಗ-ಳಲ್ಲಿ ಗೇಯತೆ ಅಷ್ಟೊಂದು ಇರಲಾರದು. ಮಾದರಿಗಾಗಿ ಕೆಲವನ್ನು ನೋಡೋಣ--

ರಾಗ -- ಕಾಂಬೋದಿ -- ಝಂಪೆತಾಳ

ಬಲ್ಲವರು ಪೇಳಿರಿ ಲೋಕದ ಈ ಪದವನು
ಫುಲ್ಲಶರನನು ರಂಗ ಪೆತ್ತ ಮಹಿಮೆಯನು ಪ

ಗರಿಯುಂಟು ನೋಡಿದರೆ ಪಕ್ಷಿಕುಲ ತಾನಲ್ಲ
ಧರೆಯ ಬೆನ್ನಲಿ ಶಿರವ ಮಡಗಿ ಕೊಂಡಿಹುದು
ಬರಿಗಾಲ ಭಾರದಲಿ ನಡೆಯಲೊಲ್ಲದು ಮುಂದೆ
ಎರಡು ಮೈ ಒಂದಾಗಿ ಕೂಡಿಕೊಂಡಿಹುದು ೧

ಇಳೆಯಲ್ಲಿ ಒಂದುಪದ ಗಗನದಲಿ ಒಂದು ಪದ
ಕುಲವೈರಿಗಳ ಕೊಂದು ನಲಿದಾಡುತಿಹುದು

ಹೊಲ ದೊಳಗೆ ಜೋಡಗಲಿ ತಿರುಗಾಡು ತಿಹುದು ಅದು
ಕಳ ದೊಳಗೆ ಕಂಬುಗಳ ಹರಡಿಕೊಂಡಿಹುದು ೨

ಜನಿಸಿದಾ ಬಳಿಯಲ್ಲಿ ತಾ ಲಜ್ಜೆ ತೊರೆದಿಹುದು
ಕುಣಿದಾಡುತಿದೆ ಹರಿಯ ತಲೆ ತುರಗವೇರಿ
ಕನಕ ನೊಡೆಯನು ಕಾಗಿನೆಲೆಯಾದಿಕೇಶವನ
ಜನಕೆ ನಿತ್ಯವು ಪ್ರಸಾದವನು ಕೊಡುತಿಹುದು ೩

ಇದು ದಶಾವತಾರ ಸ್ತುತಿಯ ಪದ್ಯವೆಂದು ಒಂದೆರಡು ಸಾಲು ಓದುವಾಗಲೇ ತಿಳಿಯಬಹುದು. ಇದರಲ್ಲಿ ಪ್ರಾಸವಿದ್ದರೂ ಯತಿ ಸರಿಯಾಗಿಲ್ಲ. ಮಾತಿನ ವಕ್ರತೆಯಿಂದಾಗಿ ಗೇಯತೆಗೆ ತಡೆಯುಂಟಾಗಿದೆ. 'ಧರೆಯ ದೆನ್ನಲಿ ಶಿರವ ಮಡಗಿಕೊಂಡಿಹುದು' ಎಂದರೆ ಶೇಷನಿಗೆ ಆಧಾರವಾಗಿ ಆದಿಕೂರ್ಮ ನಿದ್ದಾನೆ ಎಂದು ಅರ್ಥವೆ? ಧರೆ = ಪರ್ವತ (ಧರ ಎಂಬುದರ ಸಮಸಂಸ್ಕೃತರೂಪ ಧರೆಯಾಗಿರಬಹುದೆ? ಪ್ರಶ್ನ = ಪ್ರಶ್ನೆ, ದರ್ಭ = ದರ್ಭೆ ಹೀಗೆ) ಮಂದರದ ಕೆಳಗೆ ಶಿರವನ್ನು ಮಡಗಿದ ಆವೆ, ಎಂದರ್ಥವೆ? ಹೀಗೆ ಕೆಲವೆಡೆ ದುರ್ಬೋಧವಾಗುವುದೂ ಇದೆ.

ರಾಗ -- ಸಾವೇರಿ -- ಅಟತಾಳ

ಶೇಷಶಯನ ನಿನ್ನ ಪರಮಭಾಗವತರ ಸಹ--
ವಾಸ ದೊಳಿರಿಸು ಕಂಡ್ಯ ಎನ್ನನು ಪ

ಬೇಸರದೆ ನಿನ್ನ ಹೃದಯಾಬ್ಜದೊಳಗಿಡುವ
ದಾಸರೊಳಿರಿಸು ಕಂಡ್ಯ ಎನ್ನನು ಅ.ಪ

ತಂದೆಯೊಡಲನು ಸೀಳಿಸಿದವರೊಳು ದೇ--
ವೇಂದ್ರನ ತಲೆಗೆ ತಂದವರೊಳು ದು--
ರ್ಗಂಧ ಪೆಣ್ಣಿಗೆ ಚಂದನದ ಕಂಪನಿತ್ತಂಥ
ಬಾಂಧವರೊಳಗಿರಿಸು ಕಂಡ್ಯ ಎನ್ನನು ೧

ತೋಯಜವೆಂಬ ಪುಷ್ಪದ ಪೆಸರವರೊಳು
ತಾಯ ಸೊಸೆಗೆ ಮಕ್ಕಳಿತ್ತವರೊಳು
ಆಯದಿ ದ್ವಾದಶಿ ವ್ರತವ ಸಾಧಿಸಿದಂಥ
ರಾಯರೊಳಿರಿಸು ಕಂಡ್ಯ ಎನ್ನನು ೨

ಗಿಳಿನಾಯಿ ಪೆಸರಿನವರೊಳು, ಮುಗಿಲ
ಹೊಳೆಯ ಹೊಟ್ಟೆಲಿ ಹುಟ್ಟಿದವರೊಳು

ಕೆಳದಿಯ ಜರೆದು ಶ್ರೀ ಹರಿ ದಿನ ಗೆದ್ದಂಥ
ಹಳಬರೊಳಿರಿಸು ಕಂಡ್ಯ ಎನ್ನನು ೩

ಅಂಕಕ್ಕೆ ರಥವ ನಡೆಸಿದವರೊಳು ನಿ--
ಶ್ಯಂಕೆಯಿಂ ಧರ್ಮವ ಗೆದ್ದ ಹಿರಿಯರೊಳು
ಲಂಕೆಯ ಅನುದಿನ ಸ್ಥಿರ ರಾಜ್ಯವಾಳಿದ
ಕಿಂಕರರೊಳಿರಿಸು ಕಂಡ್ಯ ಎನ್ನನು ೪

ಕಾಟಿಕೆ ಕಾಸುಕೊಟ್ಟವರು ರಾಯರ ಪಂಕ್ತಿ
ಊಟವ ಬಯಸಿದಂತೆ ನಾ ಬೇಡಿದೆ
ನಾಟಕ ಧರ ನೆಲೆಯಾದಿ ಕೇಶವ ನಿ--
ನ್ನಾಟ ದೊಳಿರಿಸು ಕಂಡ್ಯ ಎನ್ನನು ೫

ಇದು ಒಂದುರೀತಿಯ ನಿಂದಾಸ್ತುತಿ, ಸ್ವಾಮಿಗಳಿಗೆ ಕಾಣಿಕೆಯಿತ್ತು, ಅವರ ಪಂಕ್ತಿ-ಭೋಜನವನ್ನು ಬಯಸಿದವರಹಾಗೆ ನಾ ಬೇಡಿದೆ ಎನ್ನುವ ಮಾತಿನಲ್ಲಿ ಅಣಕ ಕಾಣುತ್ತದೆ.

ಪ್ರಹ್ಲಾದ ನಾರದ ಪರಾಶರ ಪುಂಡರೀಕ
ವ್ಯಾಸಾಂಬರೀಷ ಶುಕಶೌನಕ ಭೀಷ್ಮಮುಖ್ಯಾನ್
ರುಕ್ಮಾಂಗದಾರ್ಜುನ ವಸಿಷ್ಠ ವಿಭೀಷಣಾದೀನ್
ಪುಣ್ಯಾನಿಮಾನ್ ಪರಮ ಭಾಗವತಾನ್ ಸ್ಮರಾಮಿ

ಎಂಬ ಶ್ಲೋಕದಲ್ಲಿ ವರ್ಣಿತರಾದವರನ್ನು ಮೇಲಿನ ಪದ್ಯದಲ್ಲಿ ಕನಕದಾಸರು ಕೊಂಕುನುಡಿಯಿಂದ ಬಣ್ಣಿಸಿದ್ದಾರೆ. ನಾನಾರ್ಥಗಳಿರುವ ಒಂದು ಪದವನ್ನು ವಿವಿಧ-ರೀತಿಯಿಂದ ಬಳಸಿರುವ ಕೀರ್ತನೆಗಳೂ ಇವೆ--

ರಾಗ -- ಮೋಹನ -- ಅಟತಾಳ

ಹರಿಮುಖಿ, ಹರಿವಾಣಿ, ಹರಿವೇಣಿ, ಹರಿಣಾಕ್ಷಿ
ಹರಿಮಧ್ಯೇ, ಹರಿಗಮನೆ
ಹರಿಯ ನಂದನ ಸಖನೆನಿಪ ಅಹೋಬಲದ
ಹರಿಯ ನೀ ತಂದು ತೋರೆ ಪ

ಇದರ ಚರಣಗಳಲ್ಲೂ ತುಂಬ ಒಗಟಿನ ಮಾತುಗಳು ಬಂದಿವೆ. ಬೀಸುಕಲ್ಲನ್ನು ಕುರಿತು--

ರಾಗ -- ಕಾಂಬೋದಿ -- ಅಟತಾಳ

ಮರನುಂಗುವ ಪಕ್ಷಿ ಮನೆಯೊಳಗೆ ಬಂದಿದೆ ಇದರ
ಕುರುಹ ಪೇಳಿ ಕುಳಿತಿದ್ದ ಜನರು ಪ

ಎಂಬ ಒಂದು ಪದ್ಯವಿದೆ. ಇವು ನೋಡಲು ಸರಲವಾಗಿದ್ದರೂ ಗೇಯತೆಯ ದೃಷ್ಟಿಯಿಂದ ಎಷ್ಟರ ಮಟ್ಟಿಗೆ ಉಚಿತವೆಂದು ಹೇಳಲಾಗದು. ಕನಕದಾಸರ ಈ ರೀತಿಯ ಮುಂಡಿಗೆಗಳು ಬೇಕಾದಷ್ಟು ಇವೆ. ಅವುಗಳ ತಲಸ್ಪರ್ಶಿಯಾದ ಸಂಶೋಧನೆ ಇನ್ನೂ ಆಗಬೇಕು. ಇಂತಹ ಒಗಟಿನ ಹಾಡುಗಳಲ್ಲೂ ಗೇಯತೆಯ ದೃಷ್ಟಿಯಿಂದ ಬಂಧುರವಾದ ಪದ್ಯಗಳೂ ಕೆಲವು ಇವೆ. ಒಂದು ಮಂಗಲ ಪದ್ಯವನ್ನು ನೋಡೋಣ.

ರಾಗ -- ಸುರುಟಿ -- ಚಾಪುತಾಳ

ಮಂಗಲಂ ಜಯ ಮಂಗಲಂ ಪ

ಅಂಧಕನನುಜನ ಕಂದನ ತಂದೆಯ
ಕೊಂದನ ಶಿರದಲಿ ನಿಂದವನ
ಚೆಂದದಿ ಪಡೆದನ ನಂದನೆಯಳನೊಲ
ವಿಂದ ಧರಿಸಿದ ಮು ಕುಂದನಿಗೆ ೧

ರಥವ ನಡೆರಿ ಸುರ ಪಥದಲ್ಲಿ ತಿರುಗುವ
ಸುತನಿಗೆ ಶಾಪವ ನಿತ್ತವನ
ಖತಿಯನು ತಡೆದನ ಸತಿಯ ಜನನಿಸುತ
ಸತಿಯರ ನಾಳಿದ ಚತುರನಿಗೆ ೨

ಹರಿಯ ಮಗನ ಶಿರ ತರಿದನ ತಂದೆಯ
ಹಿರಿಯ ಮಗನ ತಮ್ಮನ ಪಿತನ
ಭರದಿ ಭಕ್ಷಿಸುವನ ಶಿರದಲಿ ನಟಿಸಿದ
ವರಕಾಗಿ ನೆಲೆಯಾದಿ ಕೇಶವ (ರಾಯ) ಗೆ ೩.

ಅಂಧಕ = ಧೃತರಾಷ್ಟ್ರ, ಇವನ ತಮ್ಮ ಪಾಂಡು, ಇವನ ಮಗ ಧರ್ಮರಾಯ, ಇವನ ತಂದೆಯಾದ ಯಮನನ್ನು ಕೊಂದ ಅರ್ಥಾತ್ ಮೃತ್ಯುಂಜಯನಾದ ಶಿವನ ಶಿರದಲ್ಲಿ ನಿಂತ ಚಂದ್ರನನ್ನು ಹಡೆದ ಸಾಗರನ ಮಗಳಾದ ಲಕ್ಷ್ಮಿಯನ್ನು ಧರಿಸಿದ ನಾರಾಯಣನಿಗೆ ಮಂಗಲ ೧

ರಥವೇರಿ ಆಕಾಶದಲ್ಲಿ ತಿರುಗುವ ಸೂರ್ಯನ ಮಗ ಕರ್ಣನಿಗೆ ಶಾಪವಿತ್ತ ಪರಶುರಾಮನ ಕೋಪವನ್ನು ತಡೆದ ರಾಮಚಂದ್ರನ ಸತಿಯಾದ ಸೀತೆಯ ತಾಯಿ ಭೂದೇವಿಯ ಸುತ ನರಕಾಸುರ, ಇವನ ಬಂಧನದಲ್ಲಿದ್ದ (ಹದಿನಾರು ಸಾವಿರ) ಹೆಂಡತಿಯರನ್ನು ಆಳಿದ ಚತುರನಾದ ಶ್ರೀಕೃಷ್ಣನಿಗೆ ಮಂಗಲ ೨

ಹರಿ = ಸೂರ್ಯ, ಇವನ ಮಗನಾದ ಕರ್ಣನ ಶಿರಸ್ಸನ್ನು ಕತ್ತರಿಸಿದ ಅರ್ಜುನನ ತಂದೆ ಪಾಂಡುರಾಜನ ಹಿರಿಯ ಮಗ ಧರ್ಮರಾಯನ ತಮ್ಮನಾದ ಭೀಮನ ತಂದೆ ವಾಯುವನ್ನು ಭರದಿ ಭುಜಿಸುವ ಸರ್ಪಕಾಳಿಯನ ಶಿರದಲ್ಲಿ ನಟಿಸಿದ ಕಾಳಿಯಮರ್ದನ ಕೃಷ್ಣನಿಗೆ ಮಂಗಲವಾಗಲಿ ೩

ಇದೂ ಒಂದು ರೀತಿಯ ಒಗಟಿನ ಪದ್ಯವಾದರೂ ಇದರ ಪದಬಂಧ ಗೇಯತೆಗೆ ಚೆನ್ನಾಗಿ ಒಗ್ಗಿಕೊಳ್ಳುತ್ತದೆ -- ಅರ್ಥಕ್ಲೇಶವನ್ನು ಬಿಟ್ಟರೆ. ಪ್ರಾಸ, ಮತ್ತು ಯತಿಯ ಸ್ಥಾನದಲ್ಲಿ ಪ್ರಾಸಯತಿ ಇವು ಸಹಜವಾಗಿ ಬಂದಿವೆ. ಚರಣದ ಪ್ರತಿ ಎರಡನೆಯ ಪಾದದ ನಾಲ್ಕನೇ ಆವರ್ತದಲ್ಲಿ ಒಂದೇ ಅಕ್ಷರವಿದ್ದು ಮುಂದಿನದು ವಿಶ್ರಾಂತಿಸ್ಥಾನವಾಗಿ ರಾಗದ ಪಲುಕಿನಿಂದಲೇ ಸೇರುವ ರೀತಿಯೂ ಆಕರ್ಷಕವಾಗಿದೆ ಅಲ್ಲದೆ ಪ್ರತಿಚರಣದ ನಾಲ್ಕನೆಯ ಪಾದವೂ ಹೀಗೆಯೆ ಇದ್ದು ರಾಗದ ತರಂಗಿತತೆಯಿಂದಲೇ ಪಲ್ಲವಿಯನ್ನು ಕೂಡಿಕೊಳ್ಳುತ್ತದೆ. ಇದೇರೀತಿ ಅವರ ಎಲ್ಲ ಹಾಡುಗಳೂ ಇವೆಯೆನ್ನಲಾಗದು. ಇದಕ್ಕೆ ಎರಡು ಕಾರಣಗಳು ಇರಬಹುದು. ಮೊದಲನೆಯದು ಕನಕದಾಸರ ಕೊಂಕುನುಡಿಯಿಂದ ಗೇಯತೆಗೆ ತಡೆಯುಂಟಾಗಿರುವುದು. ಎರಡನೆಯದು ಅವರ ಪದ್ಯಗಳನ್ನು ಅರ್ಥಮಾಡಿಕೊಳ್ಳಲಾಗದೆ ಮುಂದಿನವರು ತಮಗೆ ತೋರಿದಂತೆ ಪದಗಳನ್ನು ಸೇರಿಸಿಯೋ, ಕೆಡಿಸಿಯೋ ಹಾಡುತ್ತಾ ಬಂದಿರುವುದು.

ಕನಕದಾಸರ ಕೃತಿಗಳಲ್ಲಿ ಭಾವಗೀತೆಯಂತಹ ರಚನೆಗಳೂ ಇವೆ, ನೀತಿಬೋಧಕವಾದ ಸರಳ ಪದ್ಯಗಳೂ ಇವೆ. ಶೃಂಗಾರ ಜಾವಳಿಗಳಂತಹವು ಕಡಮೆ. ಶೃಂಗಾರವನ್ನು ಚೆನ್ನಾಗಿ ಚಿತ್ರಿಸುವ ಶಕ್ತಿಯಿದ್ದರೂ ಕೀರ್ತನೆಗಳಲ್ಲಿ ಆ ಜಾತಿಯವು ಕಡಿಮೆ. ಇದು ಅವರ ವೈಯಕ್ತಿಕ ಒಲಿವಿಗೆ ಸಂಬಂಧಿಸಿದ್ದು. ಹಾಗೆ ಪುರಂದರದಾಸರಲ್ಲೂ ಇತರಹರಿದಾಸರಲ್ಲೂ ಕಾಣುವ ಮಧ್ಯಮಕಾಲ ಸಾಹಿತ್ಯದ ರಚನೆಯೂ ಅಪೂರ್ವ. ಹೆಚ್ಚಿನ ಕೀರ್ತನೆಗಳು ದ್ವಿಪದಿ, ಚೌಪದಿಗಳಂತಹ ಛಂದಸ್ಸಿನಲ್ಲಿ ರಚಿತವಾಗಿದ್ದು ಕೊನೆಗೆ ಅವುಗಳಿಗೆ ರಾಗವನ್ನು ಅಳವಡಿಸಿದಂತೆ ಕಾಣುತ್ತದೆ. ತಾಳಗಳಲ್ಲಿ ಝುಂಪೆ ಮತ್ತು ಚಾಪುತಾಳಗಳ ಬಳಕೆಯೇ ಹೆಚ್ಚಾಗಿದೆ.

ಈ ಪುಟ್ಟ ನಿಬಂಧದಲ್ಲಿ ಕನಕದಾಸರ ವೈಶಿಷ್ಟ್ಯವನ್ನು ಕುರಿತು ಎಲ್ಲವನ್ನೂ ಹೇಳಲು ಸಾಧ್ಯವಿಲ್ಲ. ಇದು ಒಂದು ದಿಕ್ಸೂಚಿಯಾದೀತು ಅಷ್ಟೆ. ಕನಕದಾಸರು ಅಸಲಿನಲ್ಲಿ ಕವಿ, ಅದರಲ್ಲೂ ಅನುಭಾವಿ ಕವಿ. ಮೇಲಾಗಿ ಸಂತ, ಕವಿದಾರ್ಶನಿಕ. ಅವರು ಸ್ವತಃ ಗಾಯಕರೇ

ಆಗಿದ್ದರೋ ಇಲ್ಲವೋ ತಿಳಿಯದು. ಆದರೆ ತಾನೇ ಹಾಡಿಕೊಂಡು ಪದ್ಯರಚಿಸಿದ್ದಕ್ಕು ಪದ್ಯರಚನೆ ಮಾಡಿದ ಬಳಿಕ ಹಾಡುವುದಕ್ಕು ವ್ಯತ್ಯಾಸವಿದೆ. ಹೀಗಾಗಿ ಕನಕದಾಸರ ರಚನೆಗಳಲ್ಲಿ ಕಾವ್ಯಗುಣ ಕಂಡಷ್ಟರ ಮಟ್ಟಿಗೆ ಗೇಯಾಂಶ ಕಾಣುವುದಿಲ್ಲ. ಅದನ್ನು ಈಗ ನಾವು ಹೇಗೆ ಬೇಕೋ ಹಾಗೆ ಹಾಡಲು ಸಾಧ್ಯ ಎಂಬ ಮಾತು ಬೇರೆ. ಈಗ ತಾಳ ರಹಿತವಾದ 'ವಚನ' ಗಳನ್ನೂ ತಾಳಬದ್ಧವಾಗಿ ಹಾಡುವುದಿಲ್ಲವೆ! ಅಂತಹ ರಚನೆಯಲ್ಲಿ ವಾಗ್ಗೇಯಕಾರರ ಕೃತಿಗಳಲ್ಲಿ ಕಾಣುವ ರಾಗರಮ್ಯತೆ ಇರಲಾರದೆನಿಸುತ್ತದೆ.

ಕನಕದಾಸರ ಕೀರ್ತನೆಗಳ ಸೊಗಸೇ ಬೇರೆರೀತಿಯದು. ಯಾವುದೇ ಹಾಡನ್ನು ತೆಗೆದುಕೊಂಡರೂ ಅದು ಅವರ ರಚನೆಯೆಂದು ಹೇಳಬಹುದಾದಷ್ಟು ವೈಶಿಷ್ಟ್ಯ ಅದಕ್ಕಿದೆ. ಸಾಂದರ್ಭಿಕವಾದ ಹಾಡುಗಳಲ್ಲಿ ಒಂದು ಹೊಸಚೆಲುವನ್ನು ಕಾಣಬಹುದು.

ವ್ಯಾಸರಾಜರ ಶಿಷ್ಯರಾಗಿ, ವಾದಿರಾಜರಿಗೆ ಪರಮಾಪ್ತರಾಗಿ, ಪುರಂದರ ದಾಸರ ಅನುವರ್ತಿಯಾಗಿದ್ದ ಕನಕದಾಸರು ತನ್ನ ಅಮೂಲ್ಯಕೃತಿಗಳಿಂದ ಅಮರರಾಗಿದ್ದಾರೆ. ಇಂದಿಗೂ ಅವರ ಕೃತಿಗಳು ಬೆಂದ ಎದೆಗೆ ತಂಪನ್ನೆರೆಯಬಲ್ಲವು.

## ಆಕರ ಗ್ರಂಥಗಳು :


1. ಕನಕದಾಸರ ಹಾಡುಗಳು - ಸಂ. ಬೆಟಗೇರಿ ಕೃಷ್ಣಶರ್ಮಾ, ಧಾರವಾಡ
2. ಕನಕದಾಸರ ಕೀರ್ತನೆಗಳು - ಸಂ. ಪಾವಂಜೆ ಗುರುರಾವ್, ಉಡುಪಿ.
3. ಕನಕದಾಸರ ಒಗಟುಗಳು - ಡಾ ವೆಂಕಟ್ರಾಯಿ ಆನಂದಶೇಣ್ಯೈ.
4. ಯಕ್ಷಗಾನ ಸಂಗೀತ - ಎಂ. ರಾಜಗೋಪಾಲಾಚಾರ್ಯ.
5. ಪುರಂದರದಾಸರ ಕೀರ್ತನೆಗಳು - ಸಂ. ಪಾವಂಜೆಗುರುರಾವ್.
6. ಕನ್ನಡ ಸಾಹಿತ್ಯ ಚರಿತ್ರೆ - ರಂ. ಶ್ರೀ ಮುಗಳಿ.
7. ಪದ್ಯರತ್ನಾಕರ -
8. ಕನಕದಾಸರ ಕೊಂಕುನುಡಿ - ಎಂ. ರಾಜಗೋಪಾಲಾಚಾರ್ಯ.
9. ಹರಿಭಕ್ತಿ ಸಾರ - ಕನಕದಾಸ.
10. ಮೋಹನ ತರಂಗಿಣಿ - ಕನಕದಾಸ.

# ಕನಕದಾಸರ 'ಮೋಹನತರಂಗಿಣಿ'

**ಡಾ. ಹೊಸಬೆಟ್ಟು ಸೀತಾರಾಮಾಚಾರ್ಯ, M.A., PhD.**

ಸುರತ್ಕಲ್ (ದ.ಕ.)

ಕನಕದಾಸರ ವಾಙ್ಮಯ ವಾಹಿನಿಯಲ್ಲಿ ಪ್ರಮುಖವಾದ ಎರಡು ಸೆಲೆಗಳನ್ನು ಗುರುತಿಸಬಹುದು. ವ್ಯಕ್ತಿನಿಷ್ಠವಾದ ಅಂತರಂಗದ ಭಾವಗೀತೆಗಳಂತಿರುವ ಹರಿ ಕೀರ್ತನೆಗಳ ಸೆಲೆ ಒಂದು, ಬಹಿರಂಗ ಜೀವನದ ವಸ್ತುನಿಷ್ಠ ಕಥನ- ಕೃತಿಗಳದು ಇನ್ನೊಂದು. ಈ ಎರಡು ನೆಲೆಗಳಲ್ಲಿಯೂ ಕನಕದಾಸರು ತಮ್ಮ ಲೋಕಾನುಭವ ಸಂಪನ್ನವಾದ ಪ್ರತಿಭಾಶಾಲಿತ್ವದಿಂದಾಗಿ ಸಫಲತೆ ಪಡೆದಿದ್ದಾರೆ. ಅವರೊಳಗಿನ ಕಾವ್ಯಪ್ರಜ್ಞೆ ಅವರ ದಾಸ ಮನೋಭಾವಕ್ಕೆ ಕಲಾತ್ಮಕವಾದ ಪ್ರಕಾಶ ನೀಡಿತು. ಇದರಿಂದ ದಾಸಕೂಟದಲ್ಲಿ ಅವರು ಮಹತ್ತ್ವದ ಸ್ಥಾನ ಸಿದ್ಧಿಸಿಕೊಂಡಂತೆ ಕನ್ನಡ ಕಾವ್ಯಲೋಕದಲ್ಲೂ ಮನ್ನಣೆಯ ಮಣಿಗಳಿಸಿ ಕೊಳ್ಳಲು ಸಾಧ್ಯವಾಯಿತು. ತಮ್ಮ ಕೀರ್ತನೆಗಳಿಂದ ಭಕ್ತ ಮನೋಭಾವದವರನ್ನು ತಮ್ಮೆಡೆಗೆ ಆಕರ್ಷಿಸಿದ ಕನಕದಾಸರು ತಮ್ಮ ಕಾವ್ಯವಿಲಾಸದಿಂದ ಸಹೃದಯದ ಮೆಚ್ಚುಗೆಯನ್ನೂ ಸಂಪಾದಿಸಿಕೊಂಡಿದ್ದಾರೆ.

ಹೀಗೆ ಲೌಕಿಕ ಜೀವನಾನುಭವ, ಪ್ರತಿಭೆಗಳಿಂದ ಅರಳಿದ ಕವಿತ್ವ ಅವರ ವ್ಯಕ್ತಿತ್ವದ ಬಹಿರ್ಮುಖ. ಆತ್ಮಾನುಸಂಧಾನದಿಂದ ಸಫಲತೆಗೊಂಡ ದಾಸತ್ವ ಅದರ ಅಂತರ್ಮುಖ. ಒಂದು ಸಾಮಾಜಿಕ, ಇನ್ನೊಂದು ವೈಯಕ್ತಿಕ. ಕನಕದಾಸರ ಸಾಹಿತ್ಯ ಜೀವನ ಪ್ರಜ್ಞೆಯಿಂದ ಸಾರ್ಥಕವಾಯಿತು. ಅವರ ಜೀವನ ಸಾಹಿತ್ಯ ರಸಿಕತೆಯಿಂದ ಸಫಲವಾಯಿತು. ಜೀವನಸಾಹಿತ್ಯಗಳ ಸಾಫಲ್ಯದ ಕನಕಮಾಧ್ಯಮವೇ ಕನಕದಾಸರ ಬದುಕಿನ ಸಂದೇಶ.

ಮಾನವ ಹೃದಯದ ಸ್ಥಾಯಿಭಾವ (ಹುಟ್ಟುಗುಣ)ಗಳಲ್ಲಿ ಒಂದಾದ ರತಿಯು ಲೌಕಿಕವಾಗಿ ಶೃಂಗಾರ ರಸಕ್ಕೆ ಪ್ರೇರಕ. ಅದರ ದೈವೀಸಂಬಂಧವಾದ ಅಭಿವ್ಯಕ್ತಿಯೇ ಭಕ್ತಿ. ಭಕ್ತಿಯು - ಪ್ರೀತಿ-ಪ್ರೇಮಗಳ ದಿವ್ಯವಿಕಾಸಸ್ಥಿತಿ. ಐಹಿಕವಾದ ರತಿಗೆ ಒಂದು ಮಿತಿ ಇದೆ. ಏಕೆಂದರೆ ಅದು ವಸ್ತು ನಿಷ್ಠ. ಅದನ್ನೇ ಆಧ್ಯಾತ್ಮಿಕ ಭಕ್ತಿಯನ್ನಾಗಿ, ದೈವೀಪ್ರೇಮವನ್ನಾಗಿ ಪರಿವರ್ತಿಸಿಕೊಂಡಲ್ಲಿ ಅದರ ಸುಖ ಅಮಿತ, ಅನಂತ. ವಸ್ತುಗಳ ನಶ್ವರ ಸ್ಥಿತಿಯಲ್ಲೂ ಅಭಾವದಲ್ಲೂ ಹೃದಯಸ್ಥವಾದ ಭಾವ ವೈಶಾಲ್ಯ ಅನನ್ಯವಾದ ಆನಂದವನ್ನುಂಟುಮಾಡಬಲ್ಲುದು. ಹೀಗೆ ಐಹಿಕರತಿಯನ್ನು ಆಧ್ಯಾತ್ಮಿಕ ಭಕ್ತಿಯನ್ನಾಗಿ ಉದಾತ್ತೀಕರಿಸಿದ್ದರಲ್ಲಿ ದಾಸರ ವಿಶೇಷತೆ ಇದೆ. ರತಿಯು ಶೃಂಗಾರವಾಗಿ ಅರಳಿ, ಭಕ್ತಿಯ ಫಲವಾಗಿ ಮಾಗುವಂತೆ ಮುನ್ನಡೆದುದರಲ್ಲಿ ಕನಕದಾಸರ ಅಸಾಮಾನ್ಯತೆ ಇದೆ.

ಕನಕದಾಸರ ಸಾಹಿತ್ಯ ಸಾಧನೆ, ಸಿದ್ಧಿಗಳ ದಿವ್ಯ ಪಥದಲ್ಲಿ 'ಮೋಹನ ತರಂಗಿಣಿ' ಯು ಗಮನಾರ್ಹವಾದ ಒಂದು ನೆಲೆ, ಮಜಲು. ಭೋಗನಿಷ್ಠವಾದ ಕಥಾನಕವುಳ್ಳ 'ಮೋಹನ ತರಂಗಿಣಿ'ಯನ್ನು ರಚಿಸಿದ ಕನಕದಾಸರೇ ಭಕ್ತಿಯೋಗ ನಿಷ್ಠವಾದ ವೈರಾಗ್ಯ ಬೋಧಕವಾದ ಕೀರ್ತನೆಗಳನ್ನು ಹಾಡಿದರು, 'ಹರಿಭಕ್ತಿಸಾರ'ವನ್ನೂ ನೀಡಿದರು. ಹೀಗಾಗಿ ಅವರ ವ್ಯಕ್ತಿತ್ವ - ವಿಕಾಸದ ಅಧ್ಯಯನದ ದೃಷ್ಟಿಯಿಂದ 'ಮೋಹನ ತರಂಗಿಣಿ'ಗೆ ಸಾಪೇಕ್ಷವಾದ ಮಹತ್ವವಿದೆ. ಭಕ್ತಿ, ಜ್ಞಾನ, ವೈರಾಗ್ಯ (ಒಲವು, ಅರಿವು, ಅರ್ಪಣ) ನಿಷ್ಠರೆಂದು (ಯಮಾಂಶಸಂಭೂತರೆಂದೂ) ಪ್ರಸಿದ್ಧರಾದ ಕನಕದಾಸರು ಬದುಕಿನ ಸೊಗಸು, ಸವಿಗಳನ್ನು ಅಲ್ಲಗಳೆಯದೆ - ಆರಾಧಿಸುವ ರಸಿಕ ಮನೋಭಾವವನ್ನು 'ಮೋಹನ ತರಂಗಿಣಿ'ಯಲ್ಲಿ ಧ್ವನಿಸಿದ್ದರಿಂದ ಅದು ಹೆಚ್ಚಿನ ಗಮನಕ್ಕೆ ಅರ್ಹವಾಗಿ, ಹಲವರ ಕುತೂಹಲ ಕೆರಳಿಸಿದೆ.

ಶೃಂಗಾರವೆಂಬ ನಾಣ್ಯಕ್ಕೆ ಭೋಗ - ವಿರಹಗಳೆಂಬ ಎರಡು ಮುಖಗಳು. ಶೃಂಗಾರಕ್ಕೆ ವಿರಹದಿಂದ ಬಣ್ಣವೇರುತ್ತದೆ. ಭೋಗಕ್ಕೆ - ತ್ಯಾಗದಿಂದ ಹೊಳಪು ಬರುತ್ತದೆ. ಕನಕದಾಸರು ಈ ಸತ್ಯವನ್ನು ಮನಗಂಡವರು. 'ಮೋಹನ ತರಂಗಿಣಿ' ಯಲ್ಲಿ ಶೃಂಗಾರಮಯವಾದ ಭೋಗದ ಕಥೆಯನ್ನು ಹೇಳಿದ ದಾಸರೇ, 'ನಳಚರಿತ್ರೆ' ಯಲ್ಲಿ ವಿರಹಪೂತವಾದ, ತ್ಯಾಗನಿಷ್ಠವಾದ ಶೃಂಗಾರದ ಇನ್ನೊಂದು ಮುಖವನ್ನೂ ಜಗತ್ತಿಗೆ ನೀಡಿದ್ದಾರೆ.

ಕಥೆ ಪೌರಾಣಿಕವಾಗಿದ್ದರೂ, 'ಮೋಹನ ತರಂಗಿಣಿ'ಯ ಪಾತ್ರಗಳೆಲ್ಲ ಮಾನವೀಯ ಮಾತ್ರವಲ್ಲ, ಅವೆಲ್ಲ ಕನ್ನಡಿಗರ ರೂಪ, ಲಕ್ಷಣ ಪಡೆದ ಪಾತ್ರಗಳಾಗಿ - ನಮಗೆಲ್ಲ ಆತ್ಮೀಯವಾಗುವಂತೆ ಕಲ್ಪಿಸಿದ್ದರಲ್ಲಿ ಕನಕದಾಸರ ಪ್ರತಿಭೆಯ ವಿಶಿಷ್ಟತೆ ಇದೆ. ಸಾಮಾನ್ಯ ಮಾನವರಂತೆ ಆಸೆ - ನಿರಾಸೆ, ನಲಿವು - ನೋವು, ಕೆಚ್ಚು - ರೊಚ್ಚುಗಳನ್ನು ತಮ್ಮಲ್ಲಿ ತುಂಬಿಕೊಂಡ ರತಿ - ಕಾಮ, ಉಷಾ - ಅನಿರುದ್ಧ, ಶಂಬರ - ಬಾಣ, ಹರಿ - ಹರ - ಎಲ್ಲರೂ ಪುರಾಣದ ಕಥೆಯೊಂದನ್ನು ಸಮಕಾಲೀನ ಬದುಕಿನ ವೃತ್ತಾಂತವನ್ನಾಗಿಸುವುದರಲ್ಲಿ ಸಫಲರಾಗುತ್ತಾರೆ. ಕಥೆ ನಡೆದ ಕಾಲ ಅಜ್ಞಾತ - ಪ್ರಾಚೀನವಾಗಿದ್ದರೂ, ಅದು ದೈನಂದಿನ ಬದುಕಿನ ಬಣ್ಣಪಡೆದು ಒಡಮೂಡಿದ್ದರಿಂದ 'ಮೋಹನ ತರಂಗಿಣಿ'ಯ ಅಭ್ಯಾಸಕ್ಕೆ ಪೌರಾಣಿಕ (ದೈವಿಕ) ದೃಷ್ಟಿಗಿಂತಲೂ ಐತಿಹಾಸಿಕ (ಸಾಮಾಜಿಕ) ದೃಷ್ಟಿಕೋನ ಹೆಚ್ಚು ಸಮುಚಿತವಾದೀತು. ದಾಸರ ಈ ಕೃತಿಯ ಪಠನ - ಶ್ರವಣಗಳಿಂದ ಕವಿಹಾರೈಸಿದ ಪುಣ್ಯಸಂಪಾದನೆಗಿಂತ ಹೆಚ್ಚಾಗಿ ಕವಿಹೃದಯ - ಭಾವಗಳ ಸಂಪಾದನೆ, ರಸಾಸ್ವಾದನೆ ಮುಖ್ಯಫಲವಾಗಿ ಸಿದ್ಧಿಸೀತು.

ಇಷ್ಟೆಲ್ಲವನ್ನೂ ನಿರೀಕ್ಷಿಸಿ 'ಮೋಹನ ತರಂಗಿಣಿ' ಯಲ್ಲಿ ಇಳಿಯುವವರಿಗೆ ಒಂದು ಎಚ್ಚರಿಕೆಯ ಮಾತು ಹೇಳ ಬೇಕೆನಿಸುತ್ತದೆ. 42 ಸಂಧಿಗಳಲ್ಲಿ 2729 ಸಾಂಗತ್ಯ ಪದಗಳಲ್ಲಿ ಹಬ್ಬಿ ಹರಡಿದ ಈ 'ಶೃಂಗಾರ ತರಂಗಿಣಿ' ಕಾವ್ಯವು ಓದುಗನಿಂದ ಮೊತ್ತಮೊದಲು

ಬಯಸುವುದು ಸಹೃದಯವಾದ ಸಹನೆ, ಸಮಯಾವಕಾಶಗಳನ್ನು! ಅಲೆಯಲೆಯಾಗಿ ಬರುವ ಏಕತಾನತೆಯಲ್ಲೂ ತಾಳ್ಮೆಗೆಡದೆ, ಕವಿಹೃದಯದ ಭಾವ- ರಸಗಳನ್ನು ಹುಡುಕಿ, ಹಿಡಿದು, ಮೆದ್ದು - ಮೆಲುಕಾಡುವ, ಸವಿದು ಚಪ್ಪರಿಸುವ ಹಾಡಿ - ಓಲಾಡುವ ಹೃದಯ ಸಂಪನ್ನತೆಯುಳ್ಳವರಿಗೆ- ಕಾಲ ವ್ಯವಧಾನವುಳ್ಳವರಿಗೆ ಮಾತ್ರ- ಮೋಹನ ತರಂಗಿಣಿ, ರಸ ತರಂಗಿಣಿ ಎನಿಸೀತು. ವರ್ಣಕವೆನಿಸಿದ, ಹಾಡುಗಬ್ಬವೆನಿಸಿದ ಈ ಕೃತಿಯನ್ನು ಹಾಡುತ್ತಾ, ಹಾಡಿದ್ದನ್ನು ಆಲಿಸುತ್ತ - ಕಿವಿಯುಂಡ ಶ್ರವಣಾನಂದವನ್ನು ಸವಿಯುತ್ತ - ಮೊದಲು ತಲೆದೂಗುತ್ತಿರಬೇಕು. ತೂಗುವ ಮೊದಲೇ ತಲೆಭಾರವೆನಿಸುವವರ ಪಾಡು ಬೇಡ ವೇಬೇಡ. ಕಿವಿಯಿಂದ ಕಾವ್ಯವನ್ನು ಹೀರುತ್ತ, ಆ ಮೇಲೆ ಮೆಲ್ಲಗೆ ಭಾವ - ಬುದ್ಧಿಗಳ ನೆರವಿನಿಂದ ಸಾವಕಾಶವಾಗಿ ಮೆಲುಕಾಡಲು (ಚಪ್ಪರಿಸಲು) ತೊಡಗಿದಾಗಲೇ - ಅದರ ಸವಿ - ಏನೆಂದು ಅರ್ಥವಾದೀತು. ಹಾಗಲ್ಲದವರಿಗೆ ಇನ್ನೇನೇನೋ ಎನಿಸಿದರೆ ಕವಿಯಾಗಲೀ, ಕೃತಿಯಾಗಲೀ ಅದಕ್ಕೆ ಹೊಣೆಯಲ್ಲ.

ಇಷ್ಟು ಹೇಳುವುದಕ್ಕೆ ಕಾರಣವಿದೆ. ಕನಕದಾಸರು 'ಮೋಹನ ತರಂಗಿಣಿ'ಯನ್ನು ಹಾಡಿದಾಗ (ಒರೆದಾಗ, ಬರೆದಾಗ) ಮುದ್ರಣಾವಕಾಶವಿರಲಿಲ್ಲ. ಓದುಗರ ಸಮಯಾಭಾವದ ಚಿಂತೆಯಾಗಲೀ, ವಿಮರ್ಶಕರ ಅಸಹನೆಯ ಭಯವಾಗಲೀ ಅವರಿಗೆ ಇರಲಿಲ್ಲ. 'ಸ್ವಾಂತಃಸುಖಾಯ' (ದಾಂಪತ್ಯದ ರಸಾನುಭವದಂತೆ) ಕಾವ್ಯೋಪಾಸನೆ ನಡೆಸಿದವರು ಅವರು. ನಾವು ಅತ್ಯಂತ ಸಹನೆ, ಸಹೃದಯತೆಗಳ ನೆಲೆಯಿಂದ ಕಂಡಾಗಲೇ ಕಾವ್ಯಕ್ಕೆ ನ್ಯಾಯವೆಸಗಿದಂತಾದೀತು. ಸದಾ ಪುರುಸೊತ್ತಿನ ಹುಡುಕಾಟದ ಗಡಿಬಿಡಿಯಲ್ಲಿದ್ದು, ಒಂದೇ ತುತ್ತಿನಲ್ಲಿ ಎಲ್ಲವನ್ನೂ ಮುಕ್ಕಬೇಕೆನ್ನುವ ಬಕದೃಷ್ಟಿಯ ಅಸಹನೆ, ವೇಗೋದ್ವೇಗ - ಪ್ರಾಚೀನ ಕೃತಿಗಳ ಅಭ್ಯಾಸಕ್ಕೆ ಆತಂಕಕಾರಿ. 'ಮೋಹನ ತರಂಗಿಣಿ'ಯ ಅಧ್ಯಯನದಲ್ಲಂತೂ ಈ ಎಚ್ಚರಿಕೆಯ ಮನೋಭಾವ ನಮಗೆ ಸದಾ ಸಹಕಾರಿ.

ಇಷ್ಟು ಪೀಠಿಕೆಯೊಂದಿಗೆ, ಮುನ್ನೆಚ್ಚರಿಕೆಯ ಸೂಚನೆಯೊಂದಿಗೆ ನಾವು 'ಮೋಹನ ತರಂಗಿಣಿ'ಗೆ ಇಳಿಯಬೇಕು. ಇಳಿದು ಈಸಬೇಕು. ಈಸಿ ಜಯಿಸಬೇಕು.

## 'ಮೋಹನ ತರಂಗಿಣಿ'ಯ ವಸ್ತು, ಕಥೆ :

ಆದಿಕಾವ್ಯ ರಾಮಾಯಣವು ಶ್ರೀರಾಮನಾಮ ಮಹಿಮೆಯಿಂದಾಗಿ ಭಕ್ತಿ ಪ್ರಧಾನವೆಂದೂ, ಲೋಕಾನುಭವ ಸಂಪನ್ನತೆಯ ಮಹಾಭಾರತವು ಜ್ಞಾನ ಪ್ರಧಾನವೆಂದೂ, ಭಕ್ತಿ ಬೋಧಕವಾದ ಶ್ರೀ ಮದ್ಭಾಗವತವು ವೈರಾಗ್ಯಪ್ರಧಾನವೆಂದೂ ಲೋಕಪ್ರಸಿದ್ಧ. ಭಾಗವತ ಮನೋಧರ್ಮಕ್ಕೆ ಪೋಷಕಗಳಾದ ಜ್ಞಾನ, ಭಕ್ತಿ, ವೈರಾಗ್ಯ ಬೋಧಕಗಳಾದ ಈ ಮೂರು ಮಹಾಕೃತಿಗಳಿಂದಲೂ ವಸ್ತುಗಳನ್ನು ಆಯ್ಕೆಮಾಡಿಕೊಂಡು ಕಾವ್ಯರಚಿಸಿದ್ದರಲ್ಲಿ ಕನಕದಾಸರ ವಿಶೇಷತೆ ಇದೆ. ರಾಮಾಯಣಕ್ಕೆ ಸಂಬಂಧ ಕಲ್ಪಿಸಿ 'ರಾಮಧಾನ್ಯ ಚರಿತ್ರೆ'ಯನ್ನು ಸೃಷ್ಟಿಸಿದ ಕನಕದಾಸರು, ಮಹಾಭಾರತದೊಳಗಣ ಉಪಾಖ್ಯಾನವೊಂ

ದನ್ನು 'ನಳ ಚರಿತ್ರೆ'ಯಾಗಿ ವರ್ಣಿಸಿದರು. ಮೂರನೆಯದಾದ 'ಶ್ರೀಮದ್ಭಾಗವತ'ವನ್ನು ಆಧರಿಸಿ 'ಮೋಹನ ತರಂಗಿಣಿ'ಯನ್ನು ರಚಿಸಿದರು. ಭಕ್ತಿ, ಜ್ಞಾನ, ವೈರಾಗ್ಯ - ತನ್ನ ಕೃತಿಗಳ ಫಲವಾಗಬೇಕೆಂದು ಕನಕದಾಸರು ಹೀಗೆ ಯೋಚಿಸಿ ಕೃತಿರಚನೆ ಮಾಡಿದ್ದರೆ ಆಶ್ಚರ್ಯವೇನೂ ಇಲ್ಲ. ಈ ದಾರಿಯಲ್ಲೇ ಅವರ ಇನ್ನೆರಡು.ರಚನೆಗಳಾದ 'ಹರಿಭಕ್ತಿಸಾರ' ಮತ್ತು 'ನೃಸಿಂಹಸ್ತವ'ಗಳು ಸಾರ್ಥಕವಾಗಿ ತೋರುತ್ತವೆ.

ಶ್ರೀ ಮದ್ಭಾಗವತದ ಹತ್ತನೆಯ ಸ್ಕಂದ (ಅಧ್ಯಾಯ - ೫೫, ೬೨, ೬೩. ಗಳಲ್ಲಿ) ದಲ್ಲಿ 'ಮೋಹನ ತರಂಗಿಣಿ'ಗೆ ಹಿನ್ನೆಲೆಯಾಗಿ ಬರುವ ಕಥೆಯನ್ನು ಹೀಗೆ ಸಂಗ್ರಹಿಸಬಹುದು - ಕಾಮನು ರುಕ್ಮಿಣಿಯಲ್ಲಿ ಪ್ರದ್ಯುಮ್ನನಾಗಿ ಜನಿಸಿದ್ದು, ತನ್ನ ಹಗೆಯೆಂದು ಅರಿತು ಈ ಮಗುವನ್ನು ಶಂಬರಾಸುರನು ಕದ್ದೊಯ್ದು ನೀರಿಗೆಸೆದದ್ದು, ಮುಂದೆ ಆ ಮಗುವೇ ಬದುಕಿ, ಬೆಳೆದು - ಶಂಬರಾಸುರನನ್ನು ವಧಿಸಿದ್ದು - ಕಥೆಯ ಮೊದಲಭಾಗ. ಶಿವನಿಂದ ಸಾವಿರ ತೋಳುಗಳನ್ನು ಪಡೆದ ಬಾಣಾಸುರನ ಮಗಳು ಉಷೆ - ಪ್ರದ್ಯುಮ್ನಪುತ್ರನಾದ ಅನಿರುದ್ಧನನ್ನು ಪ್ರೀತಿಸಿದ್ದು - ಇದಕ್ಕೆ ತಂದೆ ಬಾಣಾಸುರನ ವಿರೋಧದ ಪರಿಣಾಮವಾಗಿ ಶ್ರೀಕೃಷ್ಣ ಮತ್ತು ಬಾಣಾಸುರರೊಳಗೆ ಯುದ್ಧ ನಡೆದದ್ದು - ಯುದ್ಧದಲ್ಲಿ ಬಾಣಾಸುರನ ಪಕ್ಷವಹಿಸಿ ಷಣ್ಮುಖ, ಗಣಪತಿ, ಈಶ್ವರರೂ - ಶ್ರೀಕೃಷ್ಣನ ಪಕ್ಷದಲ್ಲಿ ಬಲರಾಮ, ಗರುಡ ಮೊದಲಾದವರೂ ಭಾಗವಹಿಸಿದ್ದು, ಬಾಣಾಸುರನ ತೋಳುಗಳನ್ನೆಲ್ಲ ಶ್ರೀಕೃಷ್ಣನು ಕತ್ತರಿಸತೊಡಗಿದಾಗ - ಶಿವನ ಮಾತಿನಂತೆ ಎರಡು ಬಾಹುಗಳನ್ನು ಉಳಿಸಿದ್ದೂ, ಈಶ್ವರನ ಸಂಧಾನದಂತೆ ಬಾಣಾಸುರನು ತನ್ನ ಮಗಳು ಉಷೆಯನ್ನೂ, ಬಂಧನದಲ್ಲಿರಿಸಿದ್ದ ಅನಿರುದ್ಧನನ್ನು ಶ್ರೀಕೃಷ್ಣನಿಗೊಪ್ಪಿಸಿ, ತಾನು ಪ್ರಮಥರಲ್ಲಿ ಮುಖ್ಯನಾಗಿ ಬಾಳಿದ್ದು - ಕಥೆಯ ಇನ್ನೊಂದು ಭಾಗ.

'ನಿತ್ಯಾತ್ಮಶುಕಯೋಗಿ' ಎಂಬ ಅಂಕಿತ ಬಳಸಿದ ಕವಿ (ಚಾಟು ವಿಠಲನಾಥ?) ರಚಿಸಿದ 'ಕನ್ನಡ ಭಾಗವತ'ದಲ್ಲಿ ಇದೇ ಕಥೆ ದಶಮಸ್ಕಂಧದ ೮೭, ೮೮, ೮೯ ನೇ ಸಂಧಿಗಳಲ್ಲಿ ಒಟ್ಟು ೧೭೧ ಷಟ್ಪದಿಗಳಲ್ಲಿ ಹೇಳಲ್ಪಟ್ಟಿದೆ.

ಸ್ಕಂದ ಮಹಾ ಪುರಾಣದ ಕೇದಾರಖಂಡದ ೨೦, ೨೧ ನೇ ಅಧ್ಯಾಯಗಳಲ್ಲೂ ಮತ್ತು ಕೌಮಾರಿಕಾ ಖಂಡದ ೨೪ ನೇ ಅಧ್ಯಾಯದಲ್ಲೂ ಈ ಕಥೆ ಬರುತ್ತದೆ.

ಹರಿವಂಶ (ವಿಷ್ಣುಪರ್ವ - ಅಧ್ಯಾಯ ೧೦೪-೧೨೮), ವಿಷ್ಣುಪುರಾಣ (ಸಂಪುಟ ೩, ಅಧ್ಯಾಯ ೨೬-೩೩) ಗಳಲ್ಲೂ ಇದೇ ಕಥೆ ಸ್ವಲ್ಪ ರೂಪಾಂತರ ದೊಂದಿಗೆ ಸಿಗುತ್ತದೆ.

ಕನ್ನಡ ನೇಮಿನಾಥ ಪುರಾಣಗಳಲ್ಲೂ, ಉಡುಪಿಯ ಬಳಿಯ ಕವಿ ಕಲ್ಯಾಣಕೀರ್ತಿ (ಕೀ. ಶ. ೧೪೩೯)ಯ 'ಕಾಮಚರಿತೆ'ಯಲ್ಲೂ ಜೈನ ಪುರಾಣಗಳಿಗನುಸಾರವಾಗಿ - ಈ ಕಥಾ ಪ್ರಕರಣ ದೊರೆಯುತ್ತದೆ.

ಭಾಗವತದ ಕಥೆಯನ್ನಾಧರಿಸಿ ಕಾವ್ಯರಚಿಸಿದ ಕನಕದಾಸರಿಗೆ - ಈ ಕಥಾವಸ್ತುವಿಗೆ ಸಂಬಂಧಿಸಿದಂತೆ ಇತರ ಕೃತಿ, ಪುರಾಣಗಳ ಪರಿಚಯ, ಪರಿಶ್ರಮ ಇದ್ದಿರಲೂ ಬಹುದು-

ಕನಕದಾಸರು ತಮ್ಮ ಕಾವ್ಯದ ಕಥಾ ಪ್ರಕರಣಗಳನ್ನು ಹೀಗೆ ಸೂಚಿಸಿದ್ದಾರೆ:

ಪೂಸರದಹನ, ಕಾಮೋತ್ಪತ್ತಿ,
ವರಶಂಬರಾಸುರವಧೆ, ಕಂತುಸುತನ
ಭಾಸುರಲೀಲೆ, ಬಾಣನಗೆದ್ದ
ಜಯಲಕ್ಷ್ಮೀಶನ ಕೃತಿಯ ವಿಸ್ತರಿಪೆ

(1-33)

ಹಾಗೆಯೇ ಕಥೆ ಹೇಳಿದ್ದು, ಕೇಳಿದ್ದು ಯಾರು? ಕೇಳಿ ಫಲವೇನು? ಎನ್ನುವುದನ್ನು ಹೇಳಲಾಗಿದೆ-

ಕೃತಿಪೇಳ್ದ ಕನಕದಾಸೋತ್ತಮ
ಕೇಳ್ದವ ಳತಿ ಸುಜ್ಞಾನವಧೂಟಿ
ಕೃತಿಗೆ ಕರ್ತನು ಕಾಗಿನೆಲೆಯಾದಿ
ಕೇಶವ-ಕೃತಿಯ ಕೇಳ್ದರೆ ಪುಣ್ಯವಹುದು (2-1)

'ವೀರನಾರಾಯಣನೆ ಕವಿ' ಎಂದ ಕುಮಾರವ್ಯಾಸನ ಆದರ್ಶ ಕನಕದಾಸರಲ್ಲೂ ವ್ಯಕ್ತವಾಗುತ್ತದೆ. ಇಲ್ಲಿ ಕವಿ ತನ್ನ ನಲ್ಲೆ ಜ್ಞಾನ ವಧೂಟಿಗೆ ಕತೆಯನ್ನು ಬಣ್ಣಿಸಿ ಹಾಡಿರುವುದು ಒಂದು ವಿಶೇಷ. ಪದ್ಮಕವಿ ತನ್ನ ರನ್ನೆಗೆ, ನಾಗವರ್ಮ ತನ್ನ ಮನದನ್ನೆಗೆ, ದೇವರಾಜಕವಿ ತನ್ನ ಪತ್ನಿಗೆ ಕಾವ್ಯ ಹೇಳಿದ್ದು ಕನಕದಾಸರ ಗಮನದಲ್ಲಿರಬಹುದು. ಇಲ್ಲಿ ಕಥೆಯನ್ನು ಹೆಂಡತಿಗೆ ಹೇಳಲಾಗಿದೆ ಎಂದರೆ ಇದು ದಾಂಪತ್ಯದ ಶೃಂಗಾರ ಕಥನವೆಂದೇ ಧ್ವನಿ. ಸಂಸ್ಕೃತ ಸಾಹಿತ್ಯದ ಶೃಂಗಾರ ವೈಭವವನ್ನು ಕನಕದಾಸರೂಬಲ್ಲವರಾಗಿದ್ದರು.

ಎನ್ನ ಕಣ್ಗೆ ಮಂಗಳವಪ್ಪ ಬಟ್ಟಬಲ್ಮೊಲೆಯ ಮಂಗಳರನ್ನೆ-
ಬಡನಡುವಿನ ಚೆನ್ನೆ, ಭಾಮಿನಿಯರ ರನ್ನೆ,
ಕೊಡಮೊಲೆವೆಣ್ಣೆ, ಪೂಗಣ್ಣೆ,
ಎನ್ನೆದೆಯ ಅಲರ್ದುಂಬಿ ಕುರುಳಾಂತ ಪೆಣ್ದಲೆರನ್ನೆ!
ಕಣ್ಣೆ ಮನವನಿರ್ಕುಳಿ ಗೊಳ್ವಕಡುಜಾಣ ವೆಣ್ಣುಗಳ ಅಧಿದೇವಿ
ಮಾರನ ಮಂತ್ರದೇವತೆ, ಮಂಗಳಾಂಗಿ
ಶಶಿಲಾಂಛನ ಮುಖಾನ್ವಿತೆ, ಪ್ರಮದೆ
ಮಡದಿಯರ ಮಂಡೆ ಮಾಣಿಕವೆ............

ಹೀಗೆ ತನ್ನ ನಲ್ಲೆಯನ್ನು ಕರೆಕರೆದು ಕಾವ್ಯರಸಪಾನ ಮಾಡಿಸುವ ಕವಿ ತಾಳತಂಬೂರಿ ಹಿಡಿದು ತಿರುನಾಮಧಾರಿಗಳಾದ ದಾಸೋತ್ತಮರಾದರೆಂದರೆ ಅಚ್ಚರಿಯೆನಿಸೀತು - ಶೃಂಗಾರ ವಿಲಾಸಿಯಾದ ರಸಿಕಕವಿ ತನ್ನ ಕಾರುಣ್ಯದಲ್ಲೇ ಶೃಂಗಾರ ವಿಜೃಂಭಿಸುವ ಈ ಕಬ್ಬವನ್ನು ತನ್ನ ನಲ್ಲೆಗೆ ಹೇಳಿರಬೇಕು ಎಂದರೆ ಸಹಜವಾದೀತು. (ಈ ಕಾವ್ಯದಲ್ಲಿ ಹೆಣ್ಣಿನ ಬಲ್ಮೊಲೆಗಳ ಬಣ್ಣನೆ ಇನ್ನೂರಕ್ಕಿಂತಲೂ ಹೆಚ್ಚು ಸಾರಿ ಬರುತ್ತದೆ ಎಂದರೆ ಶೃಂಗಾರದ ವಾಚ್ಯಸ್ವರೂಪ ಹೇಗಿದೆ ಎಂದು ತಿಳಿಯಬಹುದು) - ಮುಂದೆ ಶ್ರೀರಾಮಾಶ್ವಮೇಧಮ್ - ಕಾವ್ಯದ ಮುದ್ದಣ ಮನೋರಮೆಯರ ಸರಸಸಲ್ಲಾಪಕ್ಕೆ ಈ 'ಮೋಹನತರಂಗಿಣಿ'ಯೂ ಸ್ಫೂರ್ತಿ ನೀಡಿರಬೇಕು ಎಂದು ಊಹಿಸಿದರೆ ತಪ್ಪಾಗದು.

ತಮ್ಮ ಕಾವ್ಯಕ್ಕೆ 'ಮೋಹನತರಂಗಿಣಿ'ಯೆಂಬ ರಸಾರ್ದ್ರವಾದ ಮೋಹಕ ಹೆಸರನ್ನು ಕಲ್ಪಿಸಿದ್ದರಲ್ಲೂ ಕವಿಯ ರಸಿಕತೆ ವ್ಯಕ್ತವಾಗುತ್ತದೆ. 'ಮೋಹನ' ಎಂದರೆ ಸುಂದರ, ಆಕರ್ಷಕ ಎಂಬ ಅರ್ಥವಿರುವುದರ ಜತೆಗೆ 'ಸುರತ' ಎಂದೂ, ಮದನನ ಪಂಚಬಾಣ (ಮದನ, ಉನ್ಮದನ, ಮೋಹನ, ಸಂತಾಪನ, ವಶೀಕರಣ) ಗಳಲ್ಲಿ ಒಂದು ಎಂದೂ ತಿಳಿಯಬೇಕು.

ಆದ್ದರಿಂದಲೇ ಕವಿ ತನ್ನ ಕಾವ್ಯ - ಮೋಹನತರಂಗಿಣಿ
ತೆಂಗಿನತೊರದ ಮೊಲೆ ಪೊತ್ತ ಲ-
ತಾಂಗಿಯ ಬಂದುಗೆವಾಯರಂಗಿಪ ಚೆಂದುಟಿಯಂತೆ ಇನಿದು

ಎಂದಿದ್ದಾನೆ. ಅಧರಾಮೃತದ ರಾಗ, ಅನುರಾಗಗಳನ್ನು ಚಪ್ಪರಿಸುತ್ತ ಸವಿಯುತ್ತ ಹಾಡಬೇಕಾದ ಕಾವ್ಯ ಎಂದೂ ಇಲ್ಲಿನ ಧ್ವನಿ.

ನಾಡೊಳಗುಳ್ಳ ಜಾಣರು ಜಾಣೆಯರೊಡ
ನಾಡುವ ಸವಿಮಾತುಗಳ
ಪಾಡುಗಬ್ಬವ ಪರುಠವಿಸಿದ ಬಗೆಯನೀ
ನೋಡು ಮಾನಿನಿ ಮುಂದೆ ಮುಂದೆ (1-36)

ಎನ್ನುತ ತನ್ನ ಕಬ್ಬದ ಹೂರಣ, ಓರಣಗಳೇನು ಎನ್ನುವುದನ್ನು ಕವಿ ಹೇಳಿ ಮುಗಿಸಿದ್ದಾನೆ.

ವಾಣಿಯ ಭವನೆಂಬ ವ್ಯವಹಾರಿ
ಪಟ್ಟಿಯ ಗೋಣಿಯೊಳ್ ತುಂಬಿದ ರತ್ನ
ಓಣಿಯೊಳ್ ಚಲ್ಲಿದಂತಿದೆ ನಿನ್ನ ಕೃತಿಯೆಂಬ
ಮಾಣಿಕ ಮನ್ಮನೋನಾಥ-

ಎನ್ನುವುದು ಕೇಳುವ ಮನರನ್ನೆ - ಇನಿಯನಿಗೆ ಕೊಟ್ಟ ಪ್ರಶಸ್ತಿ.

ಕಾಮವೇ ಪ್ರಮುಖ ವಸ್ತುವಾಗಿ ಉಳ್ಳ, ಕಾಮನೇ ಪ್ರಧಾನಪಾತ್ರವಾಗಿ ಉಳ್ಳ - 'ಮೋಹನ ತರಂಗಿಣಿ'ಯಲ್ಲಿ ಶೃಂಗಾರದ ಚೆಲ್ಲಾಟ ತುಂಬಿದೆಯಾದರೂ, ಅಲ್ಲಿ ವಿಕೃತ ಕಾಮದ ಹುಚ್ಚಾಟವಿಲ್ಲ. ಸನಾತನ ಧರ್ಮದ ಪುರುಷಾರ್ಥಗಳಲ್ಲಿ ಕಾಮವೂ ಒಂದಲ್ಲವೇ? ಧರ್ಮಾವಿರುದ್ಧವಾದ ಕಾಮ ಜೀವನ ಪೋಷಕವೆನ್ನುವುದರಲ್ಲಿ ಎರಡು ಮಾತಿಲ್ಲ. ಆದ್ದರಿಂದಲೇ ಕವಿ ಕನಕದಾಸರು ಕಾಮನ ಕಥೆಯನ್ನು ವರ್ಣಿಸುವ ಧೈರ್ಯ ವಹಿಸಿದ್ದಲ್ಲದೆ, ಅದಕ್ಕೆ ಪೂರ್ಣಕಾಮನಾದ ಪರಮಾತ್ಮನ ಅನುಗ್ರಹವನ್ನು ಯಾಚಿಸಲು ಮುಂದಾಗಿದ್ದಾರೆ.

ಶ್ರೀ ಗಿರಿಜೇಶ್ವರ ನಾತ್ಮಾಬ್ಧಿ ರಾಮ ಸ-
ದ್ವಾಗೀಶ ಪಿತ ಪರಂಧಾಮ
ಕಾಗಿನೆಲೆಯ ರಂಗ ಸುರಸಾರ್ವಭೌಮ ಸು-
ತ್ಯಾಗಿ ಪಾಲಿಸೊ ಪೂರ್ಣಕಾಮ 1-1

ಕಾವ್ಯದ ಮೊದಲ ಸಾಂಗತ್ಯ ಇದು. ಹಾಗೆಯೇ ತನ್ನ ಗುರುಗಳಾದ ಶ್ರೀರಾಮಾನು ಮುನಿಯನ್ನೂ (1-2,3) ತಾತಾಚಾರ್ಯ (1-4) ರನ್ನು ಸ್ತುತಿಸಿ, ಮುಂದುವರಿದು ಎಲ್ಲ ದೇವತೆಗಳನ್ನು ಸ್ಮರಿಸಿ ವಾಲ್ಮೀಕಿ, ವ್ಯಾಸರ ಕಾವ್ಯಗಳನ್ನು ಕನ್ನಡಿಸಿದ ಕವಿಗಳನ್ನು (ಇವರು ಕುಮಾರವಾಲ್ಮೀಕಿ, ಕುಮಾರವ್ಯಾಸರೇ ಇರಬೇಕು) ಕೊಂಡಾಡಿ (1-17)ಯೇ ಕವಿ ಮುನ್ನಡೆದಿದ್ದಾನೆ.

ತಪ್ಪಿದರೆ ತಿದ್ದಬೇಕು (1-19) ಗುಣವಿದ್ದರೆ ಒಪ್ಪಿಕೊಳ್ಳಬೇಕು (1-20) ಎಂಬ ವಿನಯ ಕವಿಯದು, ತಾನೇನೂ ಓದುಬರಹ ತಿಳಿದವನಲ್ಲ. 'ಬರಹ ತಿಳಿಯದೇಡ ಎಂದೇ ಬ್ರಹ್ಮ ತನ್ನ ಹಣೆಯಲ್ಲಿ ಬರೆದಿದ್ದಾನೆ (1-21) ಎಂದು ಕವಿಯೂ ಹೇಳಿರುವುದು ಕುಮಾರವ್ಯಾಸನ ನುಡಿಯಂತೆ ಕೇವಲ ನಿರಹಂಭಾವ ಸೂಚಕವಾಗಿರಬಹುದೇ ? ಅಥವಾ ಸಾಂಪ್ರದಾಯಿಕ ವಾದುದಾಗಿರಬಹುದೇ ? ತಾನು ಸ್ವತಃ ಬರೆಯಲಾಗದ 'ಅನಕ್ಷರಸ್ಥ' ಎಂದದ್ದು ಅಕ್ಷರಶಃ ನಿಜವಾಗಿರಬಹುದೇ ?

ಬರಹವ ನರಿಯೆ, ನಾಪದವಿಟ್ಟು ಕಡಿತದೊಳ್
ಬರೆದು ಮಾಡಿದ ಕೃತಿಯಲ್ಲಿ (1-21)
ನೋಡಲು ಹಸ್ತವಿಲ್ಲದ ಗೀಜಗ ಸಲೆ
ಗೂಡ ಕಟ್ಟಿದ ಡಚ್ಚಳಿಕೆಯ
ಕೋಡಗಕಂಡು ಸೈರಿಸದೆ ವಿನಾಶವ
ಮಾಡಲದ್ದೇನು ಕೇಡಹುದು ?

(1-23)

ಎನ್ನುವಲ್ಲಿಯೂ ತಾನು ಬರಹಬಾರದವ ಎಂಬ ಸೂಚನೆ ಸಿಗುತ್ತದೆ. ಕವಿ ವೀರ ನಾರಾಯಣನಾದರೂ ಲಿಪಿಕಾರ ಕುಮಾರವ್ಯಾಸ ಎಂದು ಆ ಮಹಾಕವಿ ಹೇಳಿದ್ದನ್ನು ಅನುಸರಿಸಿ ತಾನು ಕೇವಲ ಬರೆದವ ಬರೆಸಿದವ ಕಾಗಿನೆಲೆಯ ರಂಗ ಎಂದು ಈ ಕವಿ ಹೇಳಬಹುದಾಗಿತ್ತು. ಇದರಿಂದ ತನಗೆ ಬರವಣಿಗೆ ಬಾರದು ಎಂಬ ಕವಿಯು ಮಾತು ದಿಟವಿರಬಹುದೆ ? ಅಲ್ಲದೆ ಪ್ರತಿ ಸಂಧಿಯ ಕೊನೆಯಲ್ಲೂ ಕಾವ್ಯವನ್ನು ಬರೆದ, ಓದಿದ, ಕೇಳಿದ ಜನರಿಗೆ ಹರಿಕೃಪೆಯಾಗಲಿ ಎನ್ನಲಾಗಿದೆ. ಇದರಿಂದಲೂ ತಾನು ಬರೆದವನು (ಹೇಳಿದವನು) ಮಾತ್ರ, ಬರೆದವನಲ್ಲ ಎಂಬ ಅಂಶಕ್ಕೆ ಬಲಬರುತ್ತವೆ. ಹೀಗೆ ಹೇಳುವ 'ವಿನಯ' ಒಂದು ಕವಿಸಮಯವಾಗಿ ಬಂದಿರಲೂ ಬಹುದು. ಆದರೆ ಬರಹಬಾರದಿದ್ದರೂ ಕಾವ್ಯ ಪರಿಶ್ರಮವುಳ್ಳ ಪ್ರತಿಭಾಶಾಲಿಗಳು ವಾಙ್ಮಯಾರಾಧನೆ ಮಾಡಿದ್ದಕ್ಕೆ ಸಾಕಷ್ಟು ನಿದರ್ಶನಗಳಿವೆ. ಜಾನಪದ ಸಾಹಿತ್ಯವಂತೂ ಇದಕ್ಕೆ ಉತ್ತಮ ಉದಾಹರಣೆ ಹೀಗಿದ್ದರೂ, ಕನಕದಾಸರು 'ಬರಹಬಾರದ' ಜ್ಞಾನಿಗಳು, ಕವಿಗಳು, ಎಂದೊಪ್ಪಿಕೊಳ್ಳಲು ಮನಸ್ಸು ಹಿಂಜರಿಯುತ್ತಿದೆ. ಭಾರತೀಯ ವೇದಾಂತದ ನಿಧಿಯೆನಿಸಿದ ಉಪನಿಷತ್, ಭಾಗವತಗಳ ಸಾರವನ್ನು ಕನ್ನಡಿಸಿದ ಪ್ರಾಜ್ಞ ಕನಕದಾಸರು, ಪ್ರೌಢವೂ ಕ್ಲಿಷ್ಟವೂ ಆದ ಮುಂಡಿಗೆಗಳನ್ನು ರಚಿಸಿದ ಪಂಡಿತವರೇಣ್ಯ ಕನಕದಾಸರು ತಾವು 'ಬರಹಬಾರದವ' ರೆಂದರೆ ಒಪ್ಪುವುದಾದರೂ ಹೇಗೆ?

## ಸಂಧಿ - ಶೀರ್ಷಿಕೆಗಳಲ್ಲಿ ಕಥೆಯ ಮುನ್ನಡೆ

ಪೀಠಿಕಾ ಸಂಧಿಯ 41 ಪದ್ಯಗಳ ಅನಂತರ, ಅಂದು ಪ್ರಚಲಿತ ವಿದ್ದ ಸಂಪ್ರದಾಯದಂತೆ ಸಮುದ್ರವರ್ಣನೆಯೊಂದಿಗೆ ಕಾವ್ಯದ ಕಥೆ ಪ್ರಾರಂಭಗೊಳ್ಳುತ್ತದೆ-

ಈ ಕಾವ್ಯಕಾದಿ ವರ್ಣನೆಯಾವುದೆನಲು ರ-
ತ್ನಾಕರ ನೆಲವೆಣ್ಣೆ ನುಡೆಯ
ಮೇಖಲೆಯೆಂಬಂತೆ ಪರಿವೇಷ್ಟಿಸಿರ್ದುದ-
ನೇಕ ಸಂಭ್ರಮವ ನೇನೆಂಬೆ (2-4)

ಸೌರಾಷ್ಟ್ರದ ವರ್ಣನೆಯಾದ ಮೇಲೆ, ದ್ವಾರಕಾಪುರದ ಬಣ್ಣನೆ ಒಂದು ಸಂಧಿಯಿಡೀ ತುಂಬಿಕೊಳ್ಳುತ್ತದೆ. ಕಂದರ್ಪಜನನ, ಶಿವತಪೋಭಂಗಕ್ಕಾಗಿ ದೇವತೆಗಳಿಂದ ಕಾಮನಿಗೆ ಪ್ರೇರಣೆ, ಒತ್ತಾಸೆ, ಮನ್ಮಥನ ದಂಡಯಾತ್ರೆ, ಕಾಮದಹನ, ರತಿಪ್ರಲಾಪ, ರತಿ ಶಂಬರಾಸುರನ ಶೋಣಿತಪುರ ಸೇರಿದ್ದು, ರತಿ ಶಂಬರಾಸುರ ಸಂಧಾನ, ಪ್ರದ್ಯುಮ್ನನಾಗಿ ಮಾರ ಜನನ, ಶಂಬರಾಸುರವಧೆ, ರತಿ ಪ್ರದ್ಯುಮ್ನವಿವಾಹ, ಜಲಕ್ರೀಡೆ, ಭೋಗವಿಲಾಸ, ಅನಿರುದ್ಧ ಜನನ, ಅನಿರುದ್ಧನಿಂದ ನಗರ ಶೋಧನೆ, ಮೃಗಯಾವಿಹಾರ ಅತ್ತ ಶಿವಭಕ್ತ ಬಾಣಾಸುರನ ಭೋಗಲೀಲೆ, ಅವನ ಮಗಳು ಉಷಾದೇವಿಯ ಶೃಂಗಾರ, ಉಷೆಗೆ ಹರ ದರ್ಶನ, ವರಪ್ರಾಪ್ತಿ, ಉಷೆ ಕಂಡ ಸ್ವಪ್ನ, ಸ್ವಪ್ನರತಿ, ವಿರಹ ಬಾಧೆ, ಸಖಿಚಿತ್ರಲೇಖೆಯಿಂದ

ಚಿತ್ರಪಟ ಲೇಖನ, ಅನಿರುದ್ಧನನ್ನು ತಂದು ಚಿತ್ರಲೇಖೆ ಉಷಾ ಅನಿರುದ್ಧ ಸಂಯೋಗಕ್ಕೆ ನೆರವಾದದ್ದು, ನಾರದನಿಂದವೃತ್ತಾಂತ ತಿಳಿದ ಬಾಣಾಸುರನ ಕ್ರೋಧ, ಬಾಣನಿಂದ ಅನಿರುದ್ಧನ ಸೆರೆ, ಕಾಳಗ, ಮಂತ್ರಿ ಕುಂಭಾಂಡಕನ ರಣ, ಹರಿ - ಹರ ಕಾಳಗ, ಕೃಷ್ಣ ಬಾಣಾಸುರನ ಎಲ್ಲ ಕೈಗಳನ್ನು ಕತ್ತರಿಸ ಹೊರಟು ಶಿವನ ಅಪೇಕ್ಷೆಯಂತೆ ಎರಡು ಕೈಗಳನ್ನು ಮಾತ್ರ ಉಳಿಸಿದ್ದು ಶಿವ ಕೃಷ್ಣನನ್ನು ಸಮಾಧಾನ ಪಡಿಸಿ. ಅನಿರುದ್ಧನನ್ನು ಬಾಣಾಸುರನ ಸೆರೆಯಿಂದ ಬಿಡಿಸಿ ಉಷೆಯೊಂದಿಗೆ ಶ್ರೀಕೃಷ್ಣನಿಗೆ ಒಪ್ಪಿಸಿದ್ದು ಕುಂಭಾಂಡಕನಿಂದ ಮದುವೆಯ ವ್ಯವಸ್ಥೆ, ಬಾಣಾಸುರ ಕೈಲಾಸ ಸೇರಿದ್ದು, ಶ್ರೀಕೃಷ್ಣ ಉಷಾ ಅನಿರುದ್ಧರನ್ನು ದ್ವಾರಕೆಗೆ ಕರೆತಂದು ಮನೆ ತುಂಬಿಸಿಕೊಂಡದ್ದು ಹೀಗೆ ಎಲ್ಲವೂ ಮಂಗಳಾಂತವಾಗಿ ಕಾವ್ಯ ಕೊನೆಗೊಳ್ಳುತ್ತದೆ.

ಇಷ್ಟು ಕಥೆಯೂ ನೇರವಾಗಿ - ತೊಡಕಿಲ್ಲದೆ ಮುನ್ನಡೆಯುತ್ತದೆ. ಕಥನ - ವರ್ಣನಗಳಿಗೆ ಮಹತ್ವಕೊಟ್ಟ ಕವಿಯಿಂದ ಪಾತ್ರ ನಿರೂಪಣೆ, ಸನ್ನಿವೇಶ ನಿರ್ಮಾಣಗಳಂತಹ ಸೂಕ್ಷ್ಮ ಅಂಶಗಳ ಕಡೆಗೆ ತಕ್ಕ ಗಮನ ಹರಿದಂತೆ ತೋರುವುದಿಲ್ಲ ಎಂಬ ಆಕ್ಷೇಪ ಸಹಜ. ಆದರೆ ಈ ಪಾತ್ರ ವಿನ್ಯಾಸ, - ವಿಶ್ಲೇಷಣೆಗಳ ದೃಷ್ಟಿಕೋನ ನಮ್ಮ ವಿಮರ್ಶಕರಿಗೆ ಪಾಶ್ಚಾತ್ಯ ವಾಙ್ಮಯ ಸಂಪರ್ಕದಿಂದಾಗಿ ಈಗ ಮುಖ್ಯವೆನಿಸಿದೆ. ಇದೇನೂ ತಪ್ಪಲ್ಲ. ಆದರೆ ನಮ್ಮ ಭಾರತೀಯ ಕಾವ್ಯ ಮೀಮಾಂಸೆ - ಅಲಂಕಾರ, ರೀತಿ, ಗುಣ, ರಸ, ಧ್ವನಿಗಳಕಡೆಗೆ ಲಕ್ಷ್ಯಹರಿಸುತ್ತ ಬೆಳೆದು ಬಂದದ್ದು. ನಾವಿಂದು ನಮ್ಮ ಹಿಂದಣ ಕಾವ್ಯಗಳನ್ನು ಆ ಮಾನ ದಂಡದಿಂದಲೇ ತೂಗಬೇಕಾದುದು ಉಚಿತ. 'ಮೋಹನತರಂಗಿಣಿ'ಯ ಕಾವ್ಯರೀತಿ - ಅಲಂಕಾರ-ರಸ-ಧ್ವನಿಗಳನ್ನು, ಘಟನಾವಳಿಗಳನ್ನು ಬಿಡಿಬಿಡಿಯಾಗಿ ನೋಡಿ - ಕವಿಯ ಕಲ್ಪನಾಶಕ್ತಿ - ಅಭಿವ್ಯಕ್ತಿ ಕೌಶಲಗಳನ್ನು ಗುರುತಿಸ ದೇಕಾದುದು ನ್ಯಾಯ.

ದ್ವಾರಕಾಪುರ, ಕಾಮದಹನ, ಯುದ್ಧ - ಪ್ರಕರಣಗಳಲ್ಲಿನ ವರ್ಣನೆ ಸ್ವಭಾವೋಕ್ತಿಗಳಿಂದ ತುಂಬಿ ಸಹಜ ಸುಂದರವಾಗಿವೆ. ರುಕ್ಮಿಣಿಯ ಪುತ್ರ ಮೋಹದ, ಪ್ರದ್ಯುಮ್ನ - ಶಿಶುವಿನ ಅಪಹರಣ, ಶಂಬರಾಸುರನ ಅಹಂಕಾರ ಖಂಡನೆ, ರತಿಯ ದಾರುಣ ಶೋಕದ ಚಿತ್ರಣ - ಎಲ್ಲವೂ ಬಿಟ್ಟ ಬಾಣದಂತೆ, ಯಾವ ಸಂಕೀರ್ಣತೆಯೂ ಇಲ್ಲದೆ ಕಥೆ ಹೇಳಿ ಮುಗಿಸುವ ಗುರಿಯನ್ನು ಸಾಧಿಸುತ್ತವೆ.

ನಡುನಡುವೆ ಕಾಣಿಸಿಕೊಳ್ಳುವ ಹೃದಯಸ್ಪರ್ಶಿ ಸರಸಪ್ರಕರಣಗಳನ್ನು ಗುರುತಿಸಿ, ಪ್ರಶಂಸಿಸುವುದು ಸಹೃದಯರ ಕರ್ತವ್ಯ.

ಗಂಡುಮಗುವನ್ನು ರುಕ್ಮಿಣಿ ಹಡೆದಾಗ ಅಲ್ಲಿನ ಸೂಲಗಿತ್ತಿಯ ಸಡಗರ, ಮಗುವಿನ ಮೈಗೆ ಗೋಮಯ ಹಚ್ಚಿ ಸ್ನಾನಮಾಡಿಸಿದ್ದು, ಹೊಕ್ಕುಳಬಳ್ಳಿ ಕತ್ತರಿಸಿದ್ದು, ಬಾಣಂತಿಯ ಶುಶ್ರೂಷೆ - ಎಲ್ಲವೂ ಮಾನವಜೀವನದ ಪ್ರಾದೇಶಿಕ - ಚಿತ್ರಣವೇ ಆಗಿದೆ.

ಬಯಸಿ, ಬಯಸಿ, ಪ್ರದ್ಯುಮ್ನನನ್ನು ಮಗುವಾಗಿ ಪಡೆದ ರುಕ್ಮಿಣಿ ತನ್ನ ಕಂದನು ಅವಳಿಗೆ ತಿಳಿಯದಂತೆ ಶಂಬರನು ಕದ್ದೊಯ್ದುದರಿಂದ ಕಣ್ಮರೆಯಾದಾಗ ಅನುಭವಿಸಿದ ದುಃಖ ಹೇಳಿ ಮುಗಿಯದು.

ಮಾಣದೆ ಮಣಿದೀಪ್ತಿಯ ಪಿಡಿದಾವಾವ
ತಾಣದೊಳರಸಿ ನಂದನನ
ಕಾಣದೆ ಕಂಗೆಟ್ಟು ಹೊರಳ್ದಳು ಮುಮ್ಮೊನೆ
ಬಾಣ ತಾಗಿದ ಹುಲ್ಲೆಯಂತೆ 4-78

ಎಣ್ಣೆಯ ತಲೆ ಗೂಡಿದುದಿಲ್ಲ, ನೊರೆವಾಲು
ಬೆಣ್ಣೆಯ ಮೆಲಿಸಿದುದಿಲ್ಲ
ಕಣ್ಣಿವೆ ಹಳಚಿ ನೋಡಿದುದಿಲ್ಲ ಮಗನ ಲಾ-
ವಣ್ಯವ ನೆಂದಳಲಿದಳು 4-79

ಕರೆದೊಡೋ ಯೆನ್ನಬಾರದೆ ಕಂದ ನಿನ್ನಯ
ಸಿರಿಮೊಗ ಗಾಣದೆಂತಿರಲೋ
ಪರಿತಾಪ ಪುಟ್ಟಿಸಿ ಪೋಗ ಬಂದೆಯ ಶ್ರೀ
ಹರಿ ಕೊಟ್ಟ ವರ ಬಯಲಾಯ್ತೆ- 4-81

ತಾಯಿಯ ಕರುಳಿನ ಯಾತನೆಯನ್ನು ದಾಸರು ಮನ ಕರಗುವಂತೆ ನಿರೂಪಿಸಿದ್ದಾರೆ. ಸವತಿಯೂ ಶ್ರೀಕೃಷ್ಣ ರುಕ್ಮಿಣಿಯನ್ನು ಸಂತೈಸುವ ರೀತಿಯು ಬಹಳ ಸಂಕ್ಷಿಪ್ತವಾಗಿ ಬಂದಿದೆ.

ಲೋಕೋಪಕಾರಕ್ಕೆಂದು ಹರನ ಕೋಪಕ್ಕೆ ಬಲಿಯಾಗಿ ಅವನ ಉರಿಗಣ್ಣಿನಿಂದ ಸುಟ್ಟು ಹೋದ ಪತಿಯನ್ನು ಕಂಡು ರತಿ ಪ್ರಲಾಪಿಸುವ ಸಂದರ್ಭವು ಕರುಣಾರಸಾರ್ದ್ರವಾಗಿದೆ.

ಬಿಸರುಹದಳ ನೇತ್ರೆಯ ಕಣ್ಣನೀರಿಂದ
ಕೆಸರಾದುದೊಡಲ ತಾಪದಲಿ
ರಸವರಿತೊಡನೆ ಭಸ್ಮೀಕೃತವಾಯ್ತು ಬ-
ಣ್ಣಿಸಬಲ್ಲರಾರು ದುಕ್ಕವನು- 8-6

ಓಪನೆ ಸಕಲ ಕಲಾಪನೆ ಸತ್ಕುಲ
ದೀಪನೆ ಲಲಿತ ಪುಂಡ್ರೇಕ್ಷು-
ಚಾಪನೆ ಮೋಹನ ರೂಪನೆ ನಿನ್ನ ಬಿ-
ಟ್ಟೀಪರಿಯಲಿ ಬಾಳ್ವೆಜೀಯ 8-18

ಮನ್ಮಥನ ರೂಪಾತಿಶಯವನ್ನೂ ಗುಣಾವಳಿಯನ್ನು ನೆನಪಿಸಿಕೊಳ್ಳುತ್ತ ಉಕ್ಕುವ ದುಃಖದಿಂದ ದಿಕ್ಕುಗಾಣದ ರತಿಯು ಪರಮೇಶ್ವರನನ್ನೆ ಶರಣು ಹೋಗುತ್ತಾಳೆ. ಆಕೆಯ ಮೊರೆ ಪಾರ್ವತಿಯ ಹೆಂಗರುಳನ್ನು ಕಲಕುತ್ತದೆ. ರತಿಗೆ ವೈಧವ್ಯವಿಲ್ಲದಂತೆ ಅನುಗ್ರಹಿಸ ಬೇಕೆಂದು ಗಿರಿಜೆಯು ಶಿವನಲ್ಲಿ ಪ್ರಾರ್ಥಿಸಲು ಹತಭಾಗಿನಿಯಾದ ರತಿಗೆ ಶಿವ ಮುತ್ತೈದೆ ತನವನ್ನು ನೀಡಿ ಸಂತೈಸುವುದು ಹೀಗಿದೆ :-

ನಿನಗೆ ವೈಧವ್ಯಲಕ್ಷಣವಿಲ್ಲ, ಮನದೊಳು
ನೆನೆದೊಡೆ ಬರ್ಪನಿನ್ನಾಳ್ದ
ಮನಸಿಜನೆನಿಸಿ ಜೀವಪನೆಂದು ಮುತ್ತೈದೆ
ತನವಿತ್ತ ನೀಶ್ವರ ರತಿಗೆ 8-40

ಆಗ ರತಿ ಶಿವನ ವಚನವನ್ನು ಪರೀಕ್ಷಿಸಬೇಕೆಂದು, ಮನದಲ್ಲಿ ಮನ್ಮಥನನ್ನು ನೆನೆದು - ಆತನನ್ನು ಕಂಡು - ಆನಂದಹೊಂದುತ್ತಾಳೆ.

ಆಡಿದ ಶಿವನ ವಾಕ್ಯವ ಕಾಣ ಬೇಕೆಂದು
ನೋಡಿದಳಾತ್ಮದೃಷ್ಟಿಯಲಿ
ಗಾಡಿಕಾರನ ಕಂಡು ಘನಪರಿತೋಷವ
ಮಾಡಿದಳಂತರಂಗದಲಿ- 8-41

ಮುಂದೆ ರುಕ್ಮಿಣಿಯ ಗರ್ಭದಲ್ಲಿ ಪ್ರದ್ಯುಮ್ನನಾಗಿ ಜನಿಸಿದ ಕಂದರ್ಪನನ್ನು ರತಿ ಮತ್ತೆ ಕೈಹಿಡಿಯುತ್ತಾಳೆ.

ಕಥಾನಿರೂಪಣೆಯಲ್ಲಿ ಪ್ರಾಸಂಗಿಕವಾಗಿ ಬರುವ ಇಂತಹ ಘಟನೆಗಳನ್ನು ಉಚಿತವಾದ ನುಡಿಗಳಿಂದ ಹೇಳಿ ಮುಗಿಸಿರುವುದೇ ಕವಿಕೌಶಲಕ್ಕೆ ಸಾಕ್ಷಿ.

ಮಾನವ ಹೃದಯ ವ್ಯಾಪಾರಗಳಲ್ಲಿ ಪರಮಾತ್ಮನ ಸಂಕಲ್ಪ, ಪ್ರೇರಣೆಗಳು ಪ್ರಧಾನ ಪಾತ್ರವಹಿಸುತ್ತವೆ ಎನ್ನುವುದಕ್ಕೆ ಶಂಬರಾಸುರ ಕಥಾನಕವೊಂದು ಒಳ್ಳೆಯ ಉದಾಹರಣೆ. ರುಕ್ಮಿಣೀ ಕುಮಾರನಾದ ಪ್ರದ್ಯುಮ್ನ ತನಗೆ ಮೃತ್ಯು ಎನ್ನುವುದನ್ನು ನಾರದನಿಂದ ಅರಿತ ಶಂಬರ, ಆ ಹಸುಗೂಸನ್ನು ಅಪಹರಿಸುವ ಕಾರ್ಯದಲ್ಲಿ ಸಫಲನಾದರೂ, ಅವನ ಅಂತ ರಂಗವೇ ಅವನಿಗೆ ಹಗೆ ಬಗೆಯುತ್ತದೆ. ಆ ಎಳೆಗೂಸನ್ನು ಕೊಲ್ಲಲು ಆ ರಕ್ಕಸನ ಮನಸ್ಸು ಹಿಂಜರಿಯುತ್ತದೆ. ಅದನ್ನು ನೀರಿಗೆ ಎಸೆಯಲು ನಿಶ್ಚಯಿಸುತ್ತಾನೆ. ಆ ರಾಕ್ಷಸನ ಹೃದ ಯದಲ್ಲಿ ಆ ಮಗುವಿನ ಕುರಿತು ಕರುಣೆ ಒಸರಿತು ಎನ್ನಬಹುದೇ ? ಅದೆಲ್ಲ ಪರಮಾತ್ಮ ಸಂಕಲ್ಪ, ಅವನದೇ ಪ್ರೇರಣೆ ಎಂದು ದಾಸರು ಸಮಾಧಾನ ನೀಡುತ್ತಾರೆ-

ಅಂತಕನೆಂಬಂತೆ ಕುವರನ ಕದ್ದುಕೊಂ
ಡಂತರದಲಿ ಪೋಪ ಖಳನ

ಅಂತರಾತ್ಮಕ ನಾಗಿ ಶ್ರೀಕೃಷ್ಣ ಬೇರೊಂದು-
ಚಿಂತಾತುರವನಿಕ್ಕಿದನು- 11-26

ರಕ್ಕಸನಿಂದ ಎಸೆಯಲ್ಪಟ್ಟ ಮಗು ಕಡಲಪಾಲಾಗುತ್ತದೆ. ಆ ಕಾರಣಿಕ ಶಿಶು ಮತ್ಸ್ಯಕೇತನನಾದ ಕಾಮನಲ್ಲದೆ ಇನ್ನಾರೂ ಅಲ್ಲ. ಹಾಗಾಗಿ ಮತ್ಸ್ಯಧ್ವಜನಾದ ಕಂದರ್ಪನು ಮತ್ಸ್ಯಗರ್ಭವನ್ನು ಪ್ರವೇಶಿಸಿ ಅಲ್ಲಿಂದ ಜನಿಸುವುದೂ ಸಾಂಕೇತಿಕವಾಗಿದೆ.

ಮುಂದೆ ಶಂಬರಾಸುರನ ವಧೆ ಪ್ರದ್ಯುಮ್ನನಿಂದ ನಡೆದು, ರತಿ-ಪ್ರದ್ಯುಮ್ನರ ವಿವಾಹದ ವರ್ಣನೆಯೊಂದಿಗೆ ಆ ಮೇಲಿನ ಕಥಾ ಭಾಗದ ನಾಯಕನಾದ ಅನಿರುದ್ಧನ ಜನನದ ಸಂಭ್ರಮದ ಕತೆಗೆ ಕಥೆ ಸಾಗುತ್ತದೆ.

ಇನ್ನೊಂದೆಡೆ ಶಿವಭಕ್ತ ಬಾಣಾಸುರನ ಪ್ರತಾಪಾತಿಶಯದ ವರ್ಣನೆಯೂ ಉಕ್ಕಿ ಹರಿಯುತ್ತದೆ. ಬಾಣಾಸುರನ ಸ್ತುತಿಪಾಠಕರು ಅವನನ್ನು ಹೊಗಳುವ ಒಂದೆರಡು (ಮಾದರಿಗಳನ್ನು) ಪ್ರಶಸ್ತಿ-ಪದ್ಯಗಳನ್ನು ಇಲ್ಲಿ ಉಲ್ಲೇಖಿಸಬಹುದು-

ಬಲಿ ಚಕ್ರವರ್ತಿ ಕುಮಾರ ಹಮ್ಮೀರ ನಿ-
ರ್ಮಲಿನ ತರಂಗ ಸತ್ಸಂಗ
ಕವಿಗಳ ಕರ್ತ ಸಮರ್ಥ ಎಂದಾಶ್ರಿತ
ರೊಲಿದು ಕೊಂಡಾಡಿದರ್ ಖಳನ 20-41

ರುದ್ರಾಶ್ರಿತ ಪಾದಾಂಬುಜ ಮಧುಪ ಸ-
ಮುದ್ರಾಂತ ಧರಣೀಶನಾತ
ಭದ್ರ ಸಿಂಹಾಸನಾರೂಢ ಸತ್ಕೀಡ ದಾ-
ರಿದ್ರ ವಿದ್ರಾವಣ ಜಯತು 20-42

ಬಾಣ ಸುಮೇರು ಬಾಣಾಸನ ಧರ ಭಕ್ತ
ಬಾಣಪಂಚಕ ಸಮರೂಪ
ಬಾಣ ಗೀರ್ವಾಣ ಸೇವಿತ ಪಾದಪಂಕಜ
ಬಾಣ ಭಾಸ್ಕರ ತೇಜ ಜಯತು 20-43

ಭಾಳಾಕ್ಷನ ಭಜನೆಯ ಮಾಡಿ ಸಾಸಿರ
ತೋಳ ಪಡೆದೊಡದ ಕೇನು
ಕಾಳಗ ದೊಳಗಿ ನಿನ್ನಿದಿರಾಗಿ ನಿಲುವ ಕ-
ಟ್ಟಾಳೊರ್ವನಿಲ್ಲೆಂದು ನುಡಿದ- 20-46

ಶಿವ ಭಕ್ತ ಬಾಣಾಸುರನ ಮಹಿಮಾತಿಶಯವನ್ನು ಮನ ತುಂಬಿ ಕೊಂಡಾಡುವುದರಲ್ಲಿ, ಅವನು ನಡೆಸಿದ ಲಿಂಗಾರಾಧನೆಯ ಪದ್ಧತಿಯನ್ನು ನೆನಪಿಗೆ ತರುವ ಶಿವ ಪೂಜಾವಿಧಾನಗಳನ್ನು ವಿಸ್ತಾರವಾಗಿ ವರ್ಣಿಸುವುದರಲ್ಲಿ ಕನಕದಾಸರ ಹೃದಯ ವೈಶಾಲ್ಯ ವ್ಯಕ್ತವಾಗುತ್ತದೆ.

ಶಿರದೆಡೆಯೊಳಿರ್ದ ಶಿವಲಿಂಗದೇವರ
ಪರಮವಸ್ತ್ರವ ಬಿಚ್ಚಿತೆಗೆದು
ವರರತ್ನಾಂಚಿತ ವೃಷಭ ಮುದ್ರೆಯನಿಟ್ಟ
ಕರ ಕಂಜ ದೊಳಗೆ ಸಾರ್ಚಿದನು- 21-22

ಸೂಡಿರ್ದ ಕುಸುಮ ಸೌರಭವ ನಾಘ್ರಾಣವ
ಮಾಡಿ ವಂದಿಸಿ ತಿರಸ್ಕರಿಸಿ,
ಊಡಿರ್ದ ಗಂಧ ಕಸ್ತುರಿಯ ನಿವಾರಿಸಿ
ನೋಡಿದ ಪರಮಾತ್ಮಕನ 21-23

ಕಿಡಿಗಣ್ಣ ತೆಲೆಯದಂದ ದೊಳುರೆ ಮುದ್ರಿಸಿ
ಜಡೆಯಾಡಿ ನೊಳಿದ್ದ ಹೆರೆಯ
ಬಿಡಿಸುವಂದದಿ ದಿವ್ಯಾಮೋದ ಪುಷ್ಪಂಗಳ
ಮುಡಿಸಿದ ಶಿವನ ಮಸ್ತಕದಿ 21-29

ಸುಮಾರು 50 ಕ್ಕೂ ಮಿಕ್ಕ ಸಾಂಗತ್ಯಗಳಲ್ಲಿ ವರ್ಣಿತವಾದ ಲಿಂಗಾರ್ಚನೆಯ ವಿವರಗಳು ಕವಿ ಸಮಕಾಲೀನತೆಯ ಅಂಶಗಳಿಂದ ಕೂಡಿದ್ದು ಐತಿಹಾಸಿಕ ಮಹತ್ವ ಪಡೆದಿವೆ.

ಕನಕದಾಸರ ಹಿರಿಯರು ಲಿಂಗಾರಾಧಕರಾಗಿದ್ದ ವೀರಶೈವರಾಗಿದ್ದರು. ಶ್ರೀ ರಾಮಾನುಜಾಚಾರ್ಯರ ಪ್ರಭಾವದಿಂದಾಗಿ ಕನಕದಾಸರು - (ಆ ಪ್ರದೇಶದ ಹಲವು ಕುರುಬ ವೃತ್ತಿಯವರು) ಶ್ರೀ ವೈಷ್ಣವ ಮನೋಧರ್ಮವನ್ನು ಬೆಳೆಸಿಕೊಂಡರು. ಮುಂದೆ ಶ್ರೀ ಮಧ್ವರ ದರ್ಶನಕ್ಕೆ ಅವರು ತಲೆಬಾಗಿದ್ದು ಅವರ ಕೃತಿಗಳ ಅಧ್ಯಯನದಿಂದ ವ್ಯಕ್ತವಾಗುತ್ತದೆ. 'ಮೋಹನತರಂಗಿಣಿ'ಯಲ್ಲಿ ಧ್ವನಿತವಾಗುವ ಕನಕದಾಸರ ಹರಿಹರಾಭೇದದನಿಲುವು ಅವರ ತತ್ತ್ವಜ್ಞಾನದ ವಿಕಾಸದ ಒಂದು ಅವಸ್ಥೆಯನ್ನು ಸೂಚಿಸುವಂತಿದೆ.

ತನಗೆ ಸಾವಿರ ತೋಳುಗಳನ್ನು ಕರುಣಿಸಿದ ಹರ ನೊಡನೆ ಬಾಣಾಸುರನು ಬೇಡಿದ್ದು ತನ್ನ ತೋಳ ಬಲಕ್ಕೆ ಸಮಬಲನಾದ ಪ್ರತಿಸ್ಪರ್ಧಿಯನ್ನು.

ಭುಜಗಾಭರಣ ತಚ್ಚರಣಂಗೆ ಸಾಸಿರ
ಭುಜ ಬಲವ್ರಜವ ಪಾಲಿಸಿದೆ

ಭುಜ ಬಲದಿಂದಲೆನ್ನೊಡನೆ ಕಾದುವ ನೊಬ್ಬ
ಭುಜ ಬಲಾಧಿಪನ ಪಾಲಿಪುದು 21-67

ಬಾಣಾಸುರನ ವೀರೋಚಿತವಾದ ಅಪೇಕ್ಷೆಯನ್ನು ಆಲಿಸಿದ ಹರನು, 'ನಿಲ್ಲು ಕಾತರಿಸದಿರು, ಆಹವದೊಳು ನಿನ್ನ ಕೊಲ್ಲುವ ಕ್ರೂರಿ ಬಂದಪನು' ಎಂದು ಆಶ್ವಾಸನೆ, ಎಚ್ಚರಿಕೆ ನೀಡುತ್ತಾನೆ. ತನಗೆ ಮೃತ್ಯು ಬರಲಿದೆ ಎಂದು ಹರವಾಣಿಯಿಂದ ಅರಿತು ಬಾಣಾಸುರ ಅಂಜಲಿಲ್ಲ. ತನಗೊಬ್ಬ ಪ್ರತಿಸ್ಪರ್ಧಿ ದೊರೆಯುತ್ತಾನೆ ಎಂದು ಆತ ಹಿಗ್ಗುತ್ತಾನೆ.

ಆದೊಡಿಂದಾನು ಸಂತಸವಾಂತೆ ಶಿವ ನಿನ್ನ
ಪಾದ ಪಂಕಜದ ಸಮ್ಮುಖದಿ
ಕಾದಲುಜ್ಜಗವೆತ್ತು ಕಡಿದಾಡುವೆ ಕೃಷ್ಣ
ಯಾದವ ಬಲಗೂಡಿ ಬರಲಿ 21-69

ತನ್ನ ಪ್ರತಾಪವನ್ನು ಮೆರೆಯುವ, ಪ್ರತಿಬಲ ನೊಡನೆ ಕಾದಾಡುವ ಸುಯೋಗ ತನಗೆಂದು ಬಂದೀತೆನ್ನುವುದು ಬಾಣಾಸುರನ ಮುಂದಿನ ಪ್ರಶ್ನೆ. ಆತನ ರಥದ ಮಯೂರಕೇತನ ಮುರಿದೊಡನೆ ಅವನಿಗೆ ಆ ಅವಕಾಶ ಒದಗುತ್ತದೆ ಎಂದು ಶಿವನು ಉತ್ತರಿಸಿದಾಗ ಬಾಣಾಸುರ ನಿಶ್ಚಿಂತನಾಗಿ ತನ್ನ ರಾಜಧಾನಿಗೆ ಮರಳುತ್ತಾನೆ. ಈ ಪ್ರಕರಣದಲ್ಲಿ ವ್ಯಕ್ತವಾಗುವ ಶಿವಭಕ್ತ ಬಾಣಾಸುರನ ವ್ಯಕ್ತಿತ್ವ ಧೀರೋದಾತ್ತವಾದದ್ದು.

ಇಂತಹ ಶ್ರೇಷ್ಠ ಶಿವಭಕ್ತನ ಮಗಳು ಉಷಾದೇವಿ. ಆಕೆಯ ಬೆಡಗು ಬಿನ್ನಾಣಗಳಿಗೆ, ವಿಲಾಸ ವಿಭ್ರಮಗಳಿಗೆ ಪಾರವಿಲ್ಲ. ಶಿವಪಾರ್ವತಿಯರನ್ನು ಕಂಡು ಈಕೆ ತನ್ನ ಮನದಾಣ್ಮನ ಸಮಾಗಮ ಸೂಚನೆಯನ್ನು ಮನಗಾಣುತ್ತಾಳೆ. ತನ್ನ ಮನದಿನಿಯ ಇನ್ನಾರೂ ಅಲ್ಲ, ಪ್ರದ್ಯುಮ್ನ ಪುತ್ರನಾದ ಅನಿರುದ್ಧ! ಶಿವಭಕ್ತನ ಪುತ್ರಿಯಾದ ಉಷೆಯೆಲ್ಲಿ ! ಶ್ರೀಕೃಷ್ಣನ ಮೊಮ್ಮಗನಾದ ಅನಿರುದ್ಧನೆಲ್ಲಿ? ಆದರೂ ಪ್ರಣಯ ಪ್ರವಾಹ ಎಲ್ಲ ಎಲ್ಲೆಗಳನ್ನು ಮೀರಿ ಉಕ್ಕಿ ಹರಿಯುತ್ತದೆ- ಒಡತಿಯ ಸಲುವಾಗಿ ಆಪ್ತಸಖಿ ಅನ್ವರ್ಥನಾಮದ ಚಿತ್ರಲೇಖೆ ಲೋಕಲೋಕಗಳನ್ನೆಲ್ಲ ಸುತ್ತಾಡಿ ಅನಿರುದ್ಧನನ್ನು ಕಾಣುತ್ತಾಳೆ. ಅನಿರುದ್ಧನೂ ತನ್ನ ಕೆಳದಿಗಾಗಿ, ಉಷೆಗಾಗಿ ಕನವರಿಸುತ್ತಿರುವುದನ್ನು ಆಕೆ ತಿಳಿಯುತ್ತಾಳೆ- ಅಂತೂ ಪ್ರಣಯಿಗಳು ಪರಸ್ಪರ ಸಂಧಿಸುವ ಸಂಚು ಏರ್ಪಡುತ್ತದೆ. ಇಲ್ಲಿಯವರೆಗಿನ ಕಥೆ ಶೃಂಗಾರವಾಹಿನಿಯಾಗಿ, ಅದ್ಭುತರಮ್ಯವಾಗಿ ಪ್ರವಹಿಸುತ್ತದೆ.

ಶೃಂಗಾರಾಭಿಮುಖವಾಗಿದ್ದ ಕಥೆ ಮುಂದೆ ರೌದ್ರ ಮುಖವನ್ನು ಪಡೆಯುತ್ತದೆ. ನಾರದನಿಂದ ತನ್ನ ಮಗಳ ಪ್ರಣಯ ವಿಚಾರತಿಳಿದ ಬಾಣಾಸುರ ಕೆರಳಿ, ಕಿಡಿಕಿಡಿಯಾಗುತ್ತಾನೆ. ಶೃಂಗಾರ ಕೇಳಿಯನ್ನು ಅಲ್ಲಗಳೆಯುವ ಕಾಳಗದ ಕಹಳೆ ಕೇಳಿಬರುತ್ತದೆ. ಯಾದವ ಸೇನೆಗೂ ಬಾಣಾಸುರನ ಬಲಕ್ಕೂ ಘೋರಯುದ್ಧ ನಡೆಯುತ್ತದೆ.

ಈಶ್ವರನು ಕೊಟ್ಟ ಮಂತ್ರಾಸ್ತ್ರವನ್ನು ಪ್ರಯೋಗಿಸಿ ಬಾಣಾಸುರ ಅನಿರುದ್ಧನನ್ನು ಕೈಸೆರೆ ಮಾಡಿಕೊಳ್ಳುತ್ತಾನೆ. ಆತನನ್ನು ಕೊಂದರೆ ಮಗಳಿಗೆ ವೈಧವ್ಯ ಬರುವುದೆಂಬ ಚಿಂತೆ ಅವನನ್ನು ಕಾಡುತ್ತದೆ. ಒಡನೆ ಕ್ರೋಧ ಕರಗಿ, ಪ್ರೀತಿಮೂಡಿ ತನ್ನ ಬಾಣಗಳಿಂದ ನೊಂದ ಅನಿರುದ್ಧನ ತನುವನ್ನು ಅಪ್ಪಿ ಸಂತಯಿಸುತ್ತಾನೆ. ಚಿಂತಿಸುವ ಮಗಳಿಗೆ ಧೈರ್ಯ ಹೇಳಿ -- ಶ್ರೀಕೃಷ್ಣನೊಡನೆ ಕಾಳಗಕ್ಕೆ ಸಿದ್ಧನಾಗುತ್ತಾನೆ ಬಾಣಾಸುರ. ಕೊನೆಗೆ ಶಿವನ ಸಂಧಾನದಿಂದ ಎಲ್ಲವೂ ಶುಭಂಕರವಾಗಿ ಮುಗಿಯುತ್ತದೆ--

ಬೋಧಾರುಹನಾದ ಪರಮೇಶನಿಮ್ಮೊಳು
ಭೇದವಿಲ್ಲೆಂದು ಸೂಚಿಸಲು
ರೋದನ ತೀರ್ಕಣಿಸಿತು ನಿಮ್ಮಮೊಮ್ಮಗೆ
ಮಾಧವಕೊಟ್ಟ ಮತ್ಸುತೆಯ 40--92

ಹರಿ--ಹರರೊಳಗೆ ಭೇದವಿಲ್ಲವೆನ್ನುವುದನ್ನು ಬಾಣಾಸುರನು ಕಂಡುಕೊಂಡು ಮಗಳನ್ನು ಶ್ರೀಕೃಷ್ಣನ ಮೊಮ್ಮಗನಿಗೆ ಕೊಡಲು ಒಪ್ಪಿಕೊಂಡು, ತಾನು ಕೈಲಾಸಕ್ಕೆ ತೆರಳುತ್ತಾನೆ. ಅನಿರುದ್ಧನ ಬಿಡುಗಡೆಯಾಗಿ, ಕುಂಭಾಂಡಕ ಮಂತ್ರಿಯ ನೇತೃತ್ವದಲ್ಲಿ ಉಷಾ ಅನಿರುದ್ಧರ ಮದುವೆ ಏರ್ಪಡುತ್ತದೆ.

ನೋಡಿದರಾಗ ಮೌಕ್ತಿಯಲಿ ಬಾಸಿಂಗವ
ಸೂಡಿದರ್ ತೊಂಡಿಲ ತಂದು
ಪಾಡಿದರ್ ಪರಮಶೋಭನದಿಂದೆ ಮದುವೆಯ
ಮಾಡಿದರ್ ಮಣಿಯ ಮಂಟಪದಿ 42--62

ಹೀಗೆ, ಈ ಕಾವ್ಯದಲ್ಲಿ ಬರುವ ಪಾತ್ರಗಳು ಪೌರಾಣಿಕ - ದೈವಿಕ ಆಗಿದ್ದರೂ, ಅವು ಮಾನವ ಸಹಜ ಭಾವ - ವಿಭಾವಗಳಿಂದ, ಕೋಪ - ಆಟೋಪಗಳಿಂದ ಕೂಡಿ ನಮಗೆ ಹತ್ತಿರವಾಗುತ್ತವೆ. ಉಷಾ - ಅನಿರುದ್ಧರ ಪ್ರಣಯದ ಕಥೆ ಇಂದೂ ನಡೆಯುವಂತ ಹದ್ದೇ. ಹೆತ್ತವರ ಸಮ್ಮತಿ ದೊರೆಯದ ಸಂದರ್ಭಗಳಲ್ಲಿ ಪ್ರಣಯಿಗಳು ರಹಸ್ಯವಾಗಿ ಒಂದಾಗುವುದು, ಮನೆಬಿಟ್ಟು ಓಡುವುದು-ಹೆತ್ತವರು ಪರಸ್ಪರ ಕಾದಾಡುವುದು-- ಎಲ್ಲ ಆಗಲೂ, ಈಗಲೂ ಇದ್ದದ್ದೇ.

'ಮೋಹನತರಂಗಿಣಿ'ಯ ಬಾಣಾಸುರನ ಶಿವಭಕ್ತಿ, ಉದಾತ್ತಶಕ್ತಿ, ಪ್ರದ್ಯುಮ್ನನ ಪ್ರತಾಪ, ಪರಾಕ್ರಮ, ಉಷೆಯ ಮುಗ್ಧಪ್ರೇಮ, ಚಿತ್ರಲೇಖೆಯ ಜಾಣತನ - ನಮ್ಮ ನೆನಪಿನಲ್ಲಿ ಉಳಿಯುವ ಕೆಲವು ಮುಖ್ಯ ಅಂಶಗಳು.

ಕನ್ನಡದಲ್ಲಿ ಈ ಮಾದರಿಯ ಚಿತ್ರಕ ಕಾವ್ಯ, ವರ್ಣಕ ಕಾವ್ಯ ಇನ್ನೊಂದಿಲ್ಲ ಎಂದು ಸಹೃದಯರು ಕೊಂಡಾಡ ಬಹುದಾದರೂ ಇದನ್ನು ಮೀರಿದ ರಸಪೂರ್ಣ - ವ್ಯಂಜಕ

ಕಾವ್ಯಗಳು ಕನ್ನಡದಲ್ಲಿ ಇವೆ ಎನ್ನುವುದನ್ನು ಮರೆಯಲಾಗದು. ಕಾವ್ಯಮೀಮಾಂಸೆಯು ತಿಳಿಸುವಂತೆ ವ್ಯಂಜನಾವೃತ್ತಿ ಪ್ರಧಾನವಾದ ಕಾವ್ಯಗಳು ಪ್ರಥಮ ಮಟ್ಟದ ಕಾವ್ಯಗಳೆಂದೂ, ಅಭಿಧಾವೃತ್ತಿ ಪ್ರಧಾನವಾದ ಕೃತಿಗಳು ಕೇವಲ ಚಿತ್ರಕ ಕಾವ್ಯಗಳು ಆ ಬಳಿಕದ ಸ್ಥಾನವನ್ನು ಪಡೆಯುತ್ತವೆ ಎನ್ನುವುದನ್ನು ಪ್ರಶಂಸೆಯ ಭರದಲ್ಲಿ ನೆನಪಿನಲ್ಲಿಟ್ಟುಕೊಳ್ಳುವುದು ಉಚಿತ.

## ಕಾವ್ಯದ ಸಾಂಗತ್ಯ ಮಾರ್ಗ

ಕನಕದಾಸರು ತಮ್ಮ ಕಾವ್ಯ 'ಮೋಹನತರಂಗಿಣಿ'ಗೆ ಆರಿಸಿಕೊಂಡ ಛಂದೋಬಂಧ ಸಾಂಗತ್ಯ. ಇದು ಹಾಡುವ ಮಟ್ಟು. ವಿಷ್ಣುಗಣ ಪ್ರಧಾನವಾದ ಅರ್ಧ ಸಮವೃತ್ತ. ತ್ರಿಪದಿಯಿಂದ ಸಾಂಗತ್ಯ ಬಂದಿರಬಹುದೇ? ಷಟ್ಪದಿಯಿಂದಲೇ ಸಾಂಗತ್ಯದ ಆವಿಷ್ಕಾರವಾಗಿರಬಹುದೇ? 'ಸಾಂಗತ್ಯ' ಎನ್ನುವ ಪದದಲ್ಲಿನ 'ಸಂಗತಿ' ಎಂದರೇನು? ಈ ಎಲ್ಲ ವಿಚಾರಗಳ ಕುರಿತು ಸಾಕಷ್ಟು ಚರ್ಚೆ ನಡೆದಿದೆ. (ನೋಡಿ: ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ -- IX -- ಸಾಂಗತ್ಯ ಕವಿಗಳು - - ಹಂಪ. ನಾಗರಾಜಯ್ಯ ಬೆಂಗಳೂರು ವಿಶ್ವವಿದ್ಯಾಲಯ ಪ್ರಕಟಣೆ. 1975)

ಕನ್ನಡ ಸಾಹಿತ್ಯದಲ್ಲಿ ಸಾಂಗತ್ಯ ಕಾಣಿಸಿ (ಕೇಳಿಸಿ) ಕೊಂಡದ್ದು ತುಂಬ ತಡವಾಗಿ. ಚಂಪೂ, ರಗಳೆ, ವಚನ, ಷಟ್ಪದಿಗಳಾದ ಮೇಲೆ ಬಂದದ್ದು ಸಾಂಗತ್ಯ. ಇದರ ಚರಿತ್ರೆ ಕೇವಲ 500 ವರ್ಷಗಳದ್ದು. ತಡವಾಗಿ ಕಾಣಿಸಿಕೊಂಡರೂ ಇದು ಬಹು ಜನಪ್ರಿಯವಾದ ಕಾವ್ಯಪ್ರಕಾರವಾಯಿತು. ಶಿಶುಮಾಯಣ, ದೇವರಾಜ, ರತ್ನಾಕರ ವರ್ಣಿ, ನಂಜುಂಡ, ಕಲ್ಯಾಣ ಕೀರ್ತಿಗಳಂತಹ ಕಬ್ಬಿಗರು ಸಾಂಗತ್ಯವನ್ನು ಬಳಸಿ, ಸಾಹಿತ್ಯವನ್ನು ಬೆಳೆಸಿದರು. ವೀರ, ರೌದ್ರಗಳ ಗುರು ಘನಭಾವಗಳನ್ನು ಸಾಂಗತ್ಯ ಸಮರ್ಥವಾಗಿ ಹೊರಲಾರದಾದರೂ, ಶೃಂಗಾರ, ಕರುಣೆಗಳಂತಹ ಸುಕುಮಾರ ಭಾವಗಳ ವ್ಯಂಜನೆಗೆ ಇದು ಹೇಳಿ ಮಾಡಿಸಿದ ಮಟ್ಟು.

ಸಾಂಗತ್ಯ 'ಮೋಹನ ತರಂಗಿಣಿ'ಯ ಕಥನ ರೀತಿಗೆ, ವರ್ಣಕ ಶೈಲಿಗೆ, ಶೃಂಗಾರ ಲಹರಿಗೆ ತುಂಬ ಒಗ್ಗಿಕೊಳ್ಳುವ ದಾಟಿ. ಈ ಪಾಡುಗಬ್ಬವನ್ನು ಹಾಡುತಿದ್ದಂತೆ ತಲೆದೂಗದಿರಲು ಸಾಧ್ಯವಿಲ್ಲ. ಶಿಲೆ ವಕ್ಷದವರ ಚಿತ್ತವ ಕರಗಿಪ ನೈದಿಲೆಯಾಣ್ಮನಂತೆ (ಚಂದ್ರನಂತೆ) ತನ್ನ ಕವಿತೆ ಎನ್ನುವುದು ಕವಿಯ ಹೆಗ್ಗಳಿಕೆ ಬೆಳ್ಗಬ್ಬಿ, ರಸದಂತಿದೆ ಒರುಸವ ಜೇನ್ಗೊಡದಂತಿದೆ ತನ್ನೀ ಕಥಾಮೃತ ಇದೊಂದು ಕರ್ಣರಸಾಯನ ಎಂಬ ಅಭಿಮಾನ ಕವಿಯದು.

ರಸಿಕರ ಕರ್ಣ ಯುಗ್ಮವ ಪೊಕ್ಕು ಮುದದಿ ಹೃ
ದ್ವಿಸಜವನಲರಿಸಿ ಮೈಗೆ

ಎಸೆವ ಪುಳಕ ದೊಸಗೆಯ ನಿತ್ತು ಶಿರವ ತೂ
ಗಿಸುವುದೀ ವಚನದ ರಚನೆ I-25

ಎಂದು ಕವಿ ವ್ಯಕ್ತಪಡಿಸಿದ ಆತ್ಮವಿಶ್ವಾಸ ವ್ಯರ್ಥವಲ್ಲ. ಆತನ ಮನದನ್ನೆಯಂತೂ ತನ್ನ ನಲ್ಲನ ಈ ಹಾಡುಗಬ್ಬವನ್ನಾಲಿಸುತ್ತ, 'ಚೆನ್ನಾದುದು, ಚೆನ್ನಾದುದು' ಎಂದು ತಲೆ ದೂಗುತ್ತಲೇ ಇದ್ದಿರಬೇಕು.

ಗಾತ್ರದಲ್ಲಿ ಭರತೇಶ ವೈಭವ (ಕವಿ - ರತ್ನಾಕರ ವರ್ಣಿ) ನೇಮಿಜಿನೇಶ ಸಂಗತಿ (III ನೆಯ ಮಂಗರಸಕವಿ) ಕುಮಾರರಾಮ ಚರಿತೆ (ನಂಜುಂಡಕವಿ) ಗಳಿಗೆ ದ್ವಿತೀಯ ಸ್ಥಾನದಲ್ಲಿ ನಿಲ್ಲುತ್ತದೆ. ಕನಕದಾಸರ 'ಮೋಹನ ತರಂಗಿಣಿ'. ಶೃಂಗಾರ-ಭಕ್ತಿಗಳೆರಡನ್ನು ಸರಿಹೊಂದಿಸಿದ ಭೋಗ - ಯೋಗ ಸಮನ್ವಯದೃಷ್ಟಿ, ಅದಕ್ಕಾಗಿ ಸಾಂಗತ್ಯ ಛಂದಸ್ಸಿನ ಕಾವ್ಯ ಸೃಷ್ಟಿ - ಹೀಗೆ ವಸ್ತು, ರೀತಿಗಳೆರಡರಲ್ಲೂ ಕನಕದಾಸರು ನಡೆದ ದಾರಿಯ ಹೊಳಹು - ಮುಂದೆ ಇದೇ ಮಾರ್ಗದಲ್ಲಿ ಮುನ್ನಡೆದ ಪ್ರತಿಭಾಶಾಲಿ -- ರತ್ನಾಕರವರ್ಣಿಗೆ ಪ್ರೇರಣೆ 'ನೀಡಿರಬಹುದೇ? -- ಎಂಬ ಜಿಜ್ಞಾಸೆಯು ಇಲ್ಲಿ ಅನುಚಿತವಾಗದು.

## ಕನಕದಾಸರ ಕನ್ನಡ ಶೈಲಿ

ಇತರ ಕೃತಿ, ಕೀರ್ತನೆಗಳಲ್ಲಿ ಸಹಜ ಸರಳವಾದ ಸವಿಗನ್ನಡವನ್ನೆ ಬಳಸಿದ ಕವಿ ಕನಕದಾಸರು 'ಮೋಹನ ತರಂಗಿಣಿ'ಯನ್ನು 'ಗೀರ್ವಾಣ ಭಾಷೆ -- ಕನ್ನಡದಿ' ಹೇಳುವುದಾಗಿ ಮೊದಲೇ ಸೂಚಿಸಿದ್ದಾರೆ. ಇಲ್ಲಿರುವುದು 'ಸಕ್ಕದ ಕನ್ನಡ ವೆರಸಿದ ಕವಿತೆ'. (15--2) ಮನದನ್ನೆ 'ಕನ್ನಡ ವಾಕ್ಯ'ದಲ್ಲಿ ಸತ್ಕೃತಿಯ ವಿಸ್ತರಿಸು ಎಂದು ಕೇಳಿಕೊಂಡರೂ, ಈ ಕಾವ್ಯ ರಚಿಸುವಾಗ ಕವಿಗೆ ಪಂಡಿತ ಗೋಷ್ಠಿಯ ಮೆಚ್ಚುಗೆಯನ್ನು ಪಡೆಯುವ ಅಭಿಲಾಷೆಯಿದ್ದಂತೆ ತೋರುತ್ತದೆ. ವಡಿ, ಪ್ರಾಸ, ಗಣ, ನೇಮ, ಲಕ್ಷಣ, ಉಚಿತಾರ್ಥ - ಇಡಿಕಿರಿದಿಹ ಭಾವಚಿತ್ರ (1--19) ತನ್ನದಾಗದೇಕೆಂಬ ಸ್ವಾಭಿಮಾನವೂ ಕವಿಯಲ್ಲಿದ್ದಿರಬಹುದು. ಹೀಗಾಗಿ ಸಮುದ್ರವರ್ಣನೆಯಿಂದ ತೊಡಗಿ ಅಷ್ಟಾದಶವರ್ಣನೆ (18) ಗಳನ್ನು ಮೋಹನತರಂಗಿಣಿಯಲ್ಲಿ ತುಂಬಿದ್ದಾನೆ ಕವಿ. ಋತುಗಳು, ದೇಟಿ, ಯುದ್ಧ -- ಮುಂತಾದವು ಗಳೊಂದಿಗೆ 'ವೇಶ್ಯಾವಾಟಿ'ಯನ್ನೂ ದಾಸರು ಕೈಬಿಟ್ಟಿಲ್ಲ.

'ಕವಿಸಮಯ'ಗಳೂ ಕಾವ್ಯದಲ್ಲಿ ಕಿಕ್ಕಿರಿದಿವೆ. ದೇವಭಾಷೆಯ ವ್ಯಾಮೋಹ 'ಮೋಹನ ತರಂಗಿಣಿ'ಯಲ್ಲಿ ಮೈದೋರಿದ ರೀತಿಗೆ ಕೆಲವು ನುಡಿಗಡಣಗಳನ್ನು ಉದಾಹರಿಸಬಹುದು.

ಮರುತ ಭುಕ್ತಾಧಿಪನ ಪರಾವತಾರ; ಅತ್ರಿ ಮುನೀಶನಂದನ ಜೂಟ ಭಕ್ತನಪುತ್ರಿ, ರಜನೀಚರ ಹರನಾತ್ಮಸಂಭವೆ, ಸುಮೇರು ಬಾಣಾಸನ ಧರಭಕ್ತ, ಸತ್ವದ ಮಿತ್ರಾಪಜಯದ ವೇಳೆ, ವಾಸವನೈಶ್ವರ್ಯ ಗೇಡಿ......

ಅಪೂರ್ವವೂ, ಸಂದಿಗ್ಧವೂ, ಕಷ್ಟಗ್ರಾಹ್ಯವೂ ಆದ ಕೆಲವು ಪದಗಳೂ ಇಲ್ಲಿವೆ -- ಇವುಗಳಲ್ಲಿ ಕೆಲವು 'ದೇಸಿ' ನುಡಿಗಳೂ ಹೌದು.

ಉಟ್ವಾಡಿ, ಯಾರಿ, ತುಕ್ಕಿ, ತಿಕಪುತ್ಸ, ಬುಜ್ಜಣಿಗೆ, ದೊಲ್ಲುಶಬ್ದ, ಗೊಂತಾಗಿ ನಿಲ ದೇಡ, ತಾಟಂಕು, ಜಲಗ್ಯೆಯ, ಚಹಡಿ, ಅದ್ದಿಕ, ಅಣಲು, ಅಭಿಗರ, ಕುಸ್ತರಿಸು.....

ಲೋಕಾನುಭವದಿಂದ ಪಕ್ವಗೊಂಡ ನಾಣ್ನುಡಿಗಳು -- ಸಾದೃಶ್ಯಗಳು ಸ್ವಭಾವೋಕ್ತಿಗಳೂ ಇಲ್ಲಿ ಹಲವಾರು ದೊರೆಯುತ್ತವೆ.

ಅರ್ಕ ನೊಳಾಟವೆ ತಮಕೆ ?
ತಾರ್ಕ್ಷನ ಕೂಡೆ ಕಾರ್ಕೋಟಕ ಮೇಳ ವಿಪುದೆ ?
ಕಳಿಲೆಯ ನಖದಲಿ ಚಿವುಟಲಹದು, ಮುಂದೆ ಲಳಿಗೆ ಕೂರುಗುರಿ
ಗಂಜುವುದೇ ?
ತಲೆ ಬಲ್ಲಿತೆಂದು ಕಲ್ಲನೆ ಹಾಯಬೇಡ,
ಅಂಗವ ತುರಿಸಲ್ಕೆ ತುರಿಸುವ ಕೈಗಳೊ ಹಂಗತಿದ್ದುವ ಶಾಸ್ತ್ರವುಂಟೆ ?
ಕನಸಿನ ಭತ್ತಕೆ ಗೋಣಿಯನಾಂಪರೆ ?
ಬಟ್ಟವೆರೆಯ ಬೆಳ್ದಿಂಗಳ ಹೊಂದಾವರೆ ಬಟ್ಟಲೊಳ್
ಸೋದಿಪರುಂಟೇ ?
ಮೂಢರಂದದೊಳೂರ ಗುದ್ದಲಿ ಕೊಂಡು ನಾಡಕಾಲುವೆಯ
ತಿದ್ದುವರೆ ?
ಪಾಪಕ್ಷಯಕೆ ಗಂಗೆಯೊಳ್ಮಿಂದರೆ ಪಾಪಿಯ ಮೊಸಳೆ ತಿಂದಂತೆ
ಕೋಪವೆಂಬುದು ಪರಮಾತ್ಮಂಗೆ ದುರ್ಗಂಧ ಲೇಪವ
ಮಾಡಿದಂತಿಹುದು
ಕಣ್ಣರಿಯ ದೊಡೇನು - ಕರುಳರಿಯದೇ?
ಸುಣ್ಣಕಲ್ಪುತಿಗಟ್ಟಿ ಮಡುವಿನೊಳಿಳಿದಂತೆ ಬಣ್ಣಗುಂದಿದೆ
ವೇದಶ್ರುತಿಯ ಬಾಯ ಬೀಯಗ - ಶ್ರೀಕೃಷ್ಣರಾಯನ ಪಾದ
ಮಂದರ.ಗಿರಿಯ ನೆತ್ತುವಡೆ ನುಗ್ಗೆಯ ದೊಣ್ಣೆಯಿಂದೆ ಮಿಾಂಟಿ
ದಡೇಳುವುದೇ?
ಒಗೆತನ ಬಿಟ್ಟು ಹೋಹಾಗ ಹಾನಿಗೆ ಹೆಪ್ಪ ಮೊಗದಿಕ್ಕಿದವ
ರಾರುಂಟು?
ಎಳೆವಾಳೆ ಬಲ್ಪಿಂಗೆ ಬಂದರೆ ಸೀಗೆಯ ಮೆಳೆಮೊಳು ಮಥನವೆ ?
ಬಪ್ಪುದು ಬಹುದಲ್ಲದೆ ಮಾಣ್ಬುದೇ ?
ಗಟ್ಟದುಪ್ಪು ಬೆಟ್ಟದ ನೆಲ್ಲಿ ಕಾಯ್ಗೆ ಸುಪ್ರಯೋಗಿಸಿದಂತೆ

ಗಂಧಶಾಲಿಯ ಬತ್ತದೊಳಗಿರ್ದ ಕಳೆಯ ಕೀಳ್ವಂದದೆ
ಖಳರತೀರ್ಕಣೆಸಿ..................ವಿಷಯಾತುರಂಗೆ ವಿವೇಕವಿಲ್ಲಿ

ಇಷ್ಟು ಉದಾಹರಣೆ ಸಾಕಾದೀತು.

'ವಡಿ' ಎಂಬ ನುಡಿಯನ್ನು ಕನಕದಾಸರು ಹೇಳಿದ್ದಾರೆ. ಪಾದದ ಮೊದಲಕ್ಷರ ಮತ್ತು ಪಾದಮಧ್ಯದ ಯತಿಯ ಮುಂದಿನ ಅಕ್ಷರವು ಸಜಾತೀಯ ವಾಗಿರುವುದೇ ವಡಿ (ಶ. ಸಾ. ಪ -- ನ ಸಂಕ್ಷಿಪ್ತ ಕನ್ನಡ ನಿಘಂಟು -- ಪು. 750 -- ನೋಡಿರಿ). ವಡಿಯ ನಿದರ್ಶನಗಳು ಈ ಕಾವ್ಯದಲ್ಲಿ ವಿರಳವಾದರೂ, ಅಲ್ಲಲ್ಲಿ ಲಕ್ಷಣವಾಗಿ ಕಾಣಿಸಿಕೊಂಡಿವೆ.

ಕರಗಸ ವೆತ್ತ ಕಂದಳಿಯೆತ್ತ ಕಾಲಸಂ
ಹರನೆತ್ತ ಕಂದರ್ಪನೆತ್ತ ?

* * * * * * * * * * * * * * * *

ಬಾರದ ಬಟ್ಟೆಯ ಬಳಿವಿಡಿದನ ಬಿಟ್ಟು
ನೇರದಿ ಬಾಳೆಂದು ನುಡಿದ

* * * * * * * * * * * * * * * *

ಮಾತಾಡು ಮಜ್ಜನ್ಮದುಃಖ ವಿಚ್ಛೇದನ
ಮಾತಾಡು ಮತ್ಪುಣ್ಯನಿಧಿಯೆ,
ಮಾತಾಡು ಮತ್ಸುತ ಕುಂಜರ ನೀ ಮುದ್ದು
ಮಾತನಾಡೆಂದಳರ್ಭಕನ 17-68

ಒಟ್ಟಿನಲ್ಲಿ ಕನಕದಾಸರು ತಮ್ಮ ನೇರ, ಸರಳ ಶೈಲಿಯಿಂದಾಗಿ ನಡುಗನ್ನಡದ ಕವಿಗಳ ಪಂಕ್ತಿಯಲ್ಲಿ ಭದ್ರಸ್ಥಾನ ಪಡೆದಿದ್ದಾರೆ. ಅವರೇ ಸ್ಮರಿಸಿಕೊಂಡಂತೆ ಕುಮಾರವ್ಯಾಸ, ಕುಮಾರವಾಲ್ಮೀಕಿ, ಮಾತ್ರವಲ್ಲ 'ರವಿ ರಶ್ಮಿ ಚರಿಸುವ ದೇಶದೊಳಿಹ ದೇವ ಕವಿಗಳ ಕಾರುಣ್ಯಪಡೆದು' ಪ್ರಭಾವ ಹೊಂದಿ ಕಾವ್ಯರಚಿಸಿದ್ದಾರೆನ್ನುವುದೂ ಸತ್ಯ. ಇವರದೇ ಆದ ಹೊಸ, ಮೌಲ್ಯದ-ಕೊಡುಗೆ ಯೇನೂ ಇಲ್ಲ ಎಂದರೂ ತಪ್ಪಾಗದು. ಆದರೂ ಕವಿಯ ಪ್ರಾಮಾಣಿಕತೆ, ವಿನಯ, ಭಗವದ್ಭಕ್ತಿಗಳು - ಎಂತಹ ನಿಷ್ಠುರ ವಿಮರ್ಶಕನನ್ನು ತಡೆದು ಮೂಕಗೊಳಿಸಬಲ್ಲವು.

## 'ಮೋಹನತರಂಗಿಣಿ'ಯಲ್ಲಿ ಮೂಡಿದ ಇತಿಹಾಸ

### (ಕೃತಿಯ ಚಾರಿತ್ರಿಕ ಅಧ್ಯಯನ)

'ಮೋಹನ ತರಂಗಿಣಿ'ಗೆ 'ಶ್ರೀಕೃಷ್ಣಚರಿತ್ರೆ' ಎಂಬ ಇನ್ನೊಂದು ಹೆಸರಿನ ಸೂಚನೆ ಇದೆ. ಇದು 'ಕೃಷ್ಣರಾಯನ ಚರಿತೆ'. ಕೃಷ್ಣರಾಯನ ಮಹಿಮೆಯನ್ನು ಹೇಳುವುದು ಇದರ

ಉದ್ದೇಶ. ಅಲ್ಲಲ್ಲಿ ಶ್ರೀಕೃಷ್ಣನ ಹೆಸರನ್ನು ಹೇಳುವ ಸಂದರ್ಭಗಳಲ್ಲಿ - ಹಲವು ಸಾರಿ 'ಕೃಷ್ಣರಾಯ' 'ದೊರೆರಾಯ ಶ್ರೀಕೃಷ್ಣ' 'ದೇಶಾಧಿಪ ಕೃಷ್ಣರಾಯ' - ಎಂದೂ, ಕೆಲವೆಡೆ 'ಅಚ್ಯುತ' ಎಂದೂ ಕರೆಯಲಾಗಿದೆ. ಸಾಮಾನ್ಯವಾಗಿ ಕಥಾನಾಯಕನ ಹೆಸರನ್ನು ಕೃತಿಗೆ ಇರಿಸುವುದು ಸಂಪ್ರದಾಯ. ಈ ಕೃತಿಯ ನಾಯಕ ಶ್ರೀಕೃಷ್ಣನಲ್ಲ. ಮೊದಲಿನಿಂದ ಅನಿರುದ್ಧ ಜನನದವರೆಗೆ ಕಾಮನು ನಾಯಕ. ಆ ಮೇಲೆ ಅನಿರುದ್ಧನೇ ನಾಯಕ. ಶ್ರೀಕೃಷ್ಣ ಪ್ರಾರಂಭದಲ್ಲಿ ಕಾಮಜನಕ, ಕೊನೆಯಲ್ಲಿ ಅನಿರುದ್ಧನ ಯುದ್ಧದಲ್ಲಿ ಸಹಾಯಕ - ಮಾತ್ರ. ಹೀಗಿದ್ದರೂ ಕೃತಿಗೆ ಶ್ರೀಕೃಷ್ಣಚರಿತ್ರೆ ಎಂಬ ಹೆಸರೇಕೆ? ಕುಮಾರವ್ಯಾಸನು ಪಾಂಡವ - ಕೌರವರ ಕಥೆಯನ್ನು 'ಕೃಷ್ಣಕಥೆ'ಯೆಂದು ಕರೆದುದನ್ನು ಅನುಸರಿಸಿ - ಎಲ್ಲವೂ ಶ್ರೀಕೃಷ್ಣಮಯ, ಅವನದೇ ಸೂತ್ರಧಾರಿತ್ವ - ಎಂಬ ನಿಲುವಿನಿಂದ ಭಕ್ತರಾದ ಕನಕದಾಸರು ತನ್ನ 'ಮೋಹನತರಂಗಿಣಿ'ಯನ್ನು ಆಧ್ಯಾತ್ಮಿಕವಾಗಿ 'ಶ್ರೀಕೃಷ್ಣ ಚರಿತ್ರೆ' ಎಂದೇ ಕರೆದಿರಬಹುದಲ್ಲವೇ ?

ಶ್ರೀ ಬೆಟಗೇರಿ ಕೃಷ್ಣಶರ್ಮರು 'ಮೋಹನತರಂಗಿಣಿ'ಯನ್ನು ವಿಶ್ಲೇಷಿಸುತ್ತ - ಕಾವ್ಯದಲ್ಲಿನ ಇತರ ವರ್ಣನಾ ಪ್ರಸಂಗಗಳನ್ನು ಗಮನದಲ್ಲಿರಿಸಿಕೊಂಡು ಅಲ್ಲಿರುವುದು ಕನಕದಾಸರ ಕಾಲದ ದೊರೆಯಾದ ಶ್ರೀಕೃಷ್ಣದೇವರಾಯನ ವೈಭವಪೂರ್ಣ ವಿಜಯನಗರದ ಇತಿಹಾಸದ ಚಿತ್ರ ಎಂಬ ನಿರ್ಣಯಕ್ಕೆ ಬಂದಿದ್ದಾರೆ. (ನೋಡಿರಿ : ಶ್ರೀ ಬೆಟಗೇರಿ ಕೃಷ್ಣಶರ್ಮ - ಕನಕದಾಸರು ಕಂಡ ವಿಜಯನಗರ - ಕರ್ನಾಟಕ ಜನಜೀವನ ಪುಸ್ತಕದ ಪು. 65-105. ಸಮಾಜ ಪುಸ್ತಕಾಲಯ ಧಾರವಾಡ, 1963) ಪಂಪ (ವಿಕ್ರಮಾರ್ಜುನ ವಿಜಯ) ಪೊನ್ನ (ಭುವನೈಕ ರಾಮಾಭ್ಯುದಯ) ರನ್ನ (ಸಾಹಸ ಭೀಮವಿಜಯ) ರುದ್ರಭಟ್ಟ (ಜಗನ್ನಾಥ ವಿಜಯ) ರಂತೆ -- ಕವಿಗಳು ತಮ್ಮಕಾಲದ ರಾಜ -- ಚಕ್ರವರ್ತಿಗಳನ್ನು ಕಾವ್ಯನಾಯಕ ನೊಂದಿಗೆ ಸಮೀಕರಿಸಿ ವರ್ಣಿಸಿದ ಪರಂಪರೆಯನ್ನು ಕನಕದಾಸರು 'ಮೋಹನತರಂಗಿಣಿ'ಯಲ್ಲಿ ಮುಂದುವರಿಸಿರಬಹುದು.

ಕ್ರಿ.ಶ. ೧೪೮೫ ರಲ್ಲಿ (ಕ್ರಿ.ಶ. ೧೪೮೭ ರಲ್ಲಿಯೋ -- ಅದಕ್ಕೂ ಒಂದೆರಡು ವರ್ಷಗಳ ಹಿಂದೋ, ಮುಂದೋ) ಜನಿಸಿದ ಕನಕದಾಸರು ಶ್ರೀಕೃಷ್ಣದೇವರಾಯನ ಶ್ರೀಮಂತವಾದ ರಾಜ್ಯಭಾರವನ್ನು ಕಂಡಿರಬಹುದು. ಅಚ್ಯುತರಾಯನ ಸುಪ್ತಜ್ವಾಲಾಮುಖಿಯಂತಿದ್ದ ಸಂಕ್ರಮಣಕಾಲದ ಆಡಳಿತವನ್ನೂ, ಅಳಿಯ ರಾಮರಾಜನ ವೀರಪ್ರತಾಪದ ಆಳ್ವಿಕೆಯನ್ನೂ ಕಂಡಿರಬಹುದು. ತಿಮ್ಮಪ್ಪನಾಗಿ, ಆ ಮೇಲೆ ಕನಕನಾಯಕನಾಗಿ ಮತ್ತೆ 'ಮೊನೆಗಾರದಣಿಯಾಗಿ' ಕಾಳಗದ ಕಣದಲ್ಲಿ ಪಳಗಿದ ದಣಾಯಕರಾಗಿ - ಕಾಲದ ಮೂಸೆಯಲ್ಲಿ ಪುತ್ತಳಿಯಾಗಿ ಬೆಳಗಿಬಂದ ಕನಕದಾಸರಿಗೆ - ತಮ್ಮ ಪೌರಾಣಿಕ ಕೃತಿಯಲ್ಲೂ ಸಮಕಾಲೀನ ಜೀವನದ ಸ್ಥಿತಿ ಗತಿಗಳ ಕಡೆಗೆ ನಿರ್ಲಿಪ್ತರಾಗಿ ದೂರವಿರಲು ಅಸಾಧ್ಯವಾಗಿರಬೇಕು ಆ ಅಸಾಧ್ಯತೆಯಿಂದ ಕಾವ್ಯಕ್ಕೆ ಹೆಚ್ಚಿನ ಬಣ್ಣ, ಕಳೆಯೇರುವುದು. ಸಾಧ್ಯವಾಯಿತೆನ್ನುವುದು ಸಂತೋಷದ ವಿಚಾರ.

ವಿದೇಶೀ ಪ್ರವಾಸಿಗಳಾದ ನಿಕೋಲೋಕೊಂಟಿ (ಕ್ರಿ.ಶ. ೧೪೨೧) ಅಬ್ದುಲ್‌ರಜಾಕ್ (೧೪೪೩) ಬಾರ್‌ಬೋಸಾ (೧೫೧೪) ಡಾಮಿಂಗೊ ಪಾಯೆಸ್ (೧೫೨೦) ಇವರ ಪ್ರವಾಸ ಕಥನದ ಉಲ್ಲೇಖಗಳು ಮೋಹನತರಂಗಿಣಿಯ ಹಲವು ವರ್ಣನೆಗಳಿಗೆ, ನಗರ ಚಿತ್ರಣ, ಸನ್ನಿವೇಶಗಳಿಗೆ ಸರಿಹೊಂದಿಕೊಳ್ಳುತ್ತವೆ. ಕಾವ್ಯದಲ್ಲಿ ವರ್ಣಿತವಾದ ಕಾಮನ ಹಬ್ಬ (ವಸಂತೋತ್ಸವ), ಓಕುಳಿಯಾಟ, ನರ್ತನ, ಕೋಲಾಟ, ರಾಟಣದುಯ್ಯಾಲೆ (ಸಂಧಿ ೧೪-೨೨), ಕ್ರೀಡಾಕುಳಿ (೧೪-೨೮) ಎಲ್ಲವೂ ವಿಜಯನಗರದ ದೃಶ್ಯಗಳೇ-

ನೋಡಲು ಕಣ್ಗೆಸೆದುವು ಚಂದ್ರಕಾಂತದ 'ಕ್ರೀಡಾಕುಳಿ'ಗಳಲ್ಲಲ್ಲಿ
ಜೋಡಣೆಗೆಯ್ದ ಸುವರ್ಣ ಮಂಟಪದ ಕೈವಾಡವ ನೇನ ಬಣ್ಣಿಪೆನು
(೧೪-೨೮)

ನರ್ತನ, ಕೋಲಾಟ, ಹೊನ್ನಂಡೆಗಳನಾಂತು
ಪುತ್ತಳಿ ಮದನ ಕೈಯೆಡೆಯ
ಚಿತ್ತರಗೈದಿರ್ದ ಬಿನ್ನಾಣಗಳ ನೋಡಿ
ಚಿತ್ತೈಸಿದನು ಕೃಷ್ಣನಗುತ (ಸಂ. ೧೪-೩೦)

ಶಾಲೆಗಳಿಂದೆ, ಕುಚ್ಚುಗಳಿಂದೆ,
ಕಮ್ಮಲರ್ ಮಾಲೆಝಲ್ಲರಿ - ಝಲ್ಲಿಯಿಂದೆ
ಭಾಲೆಯರುಗಳ ಕಣ್ಮನಕೆ ರಾಟಣದುಯ್ಯಾಲೆ
ನಾಲ್ದೆಸೆಯೊಳೊಪ್ಪಿದವು (೧೪-೩೧)

ನಿಜಲೀಲೆ ಯೊಳಗಿರೆ ಶ್ರೀಕೃಷ್ಣರಾಯ ನ
ಗ್ರಜ ಕನಿಷ್ಠರುಗಳು ತಮ್ಮ
ಗಜಗನ ಮನೆಯರೊಂದುಗೂಡಿ ಕ್ರೀಡಾಕುಲ-
ವ್ರಜದೊಳ್ ಓಕುಳಿಯನಾಡಿದರು (೧೪-೭೪)

ಕಾವ್ಯಪ್ರಾರಂಭದ ದೇಶ-ಪುರ ವರ್ಣನೆಗಳಲ್ಲಿ ಕನಕದಾಸರು ತಮ್ಮೊಂದಿಗೆ ಓದುಗರನ್ನು ವಿಜಯನಗರದ ರಾಜ್ಯದೊಳಗೆಲ್ಲ ಸುತ್ತಾಡಿಸುತ್ತಾರೆ. ಗ್ರಾಮ, ಪುರ, ಖರ್ವಡ, ಖೇಡ, ಪಟ್ಟಣ, ನಗರಗಳನ್ನು ದಾಟುತ್ತ, ಹೊಳೆ - ಹಳ್ಳಗಳನ್ನು, ಅವುಗಳ ತೀರದಲ್ಲಿನ 'ಷಡ್ದರ್ಶನಾರ್ಯ'ರಾದ ಬ್ರಾಹ್ಮಣರ ಅಗ್ರಹಾರಗಳನ್ನೂ, ವೀರರಿಗೆ 'ವೀರಮಾನ್ಯ'ವಾಗಿ ಕೊಟ್ಟ ಪುರಗಳನ್ನು ತೋರುತ್ತ ಮುನ್ನಡೆಯುತ್ತಾರೆ. ಕಂಬಿಯೊಳ್ (ಕಾವಡಿಗಳಲ್ಲಿ) ತೊರೆನೀರ ತರಿಸಿ ನಿರ್ಮಿಸಿದ ಅರವಟ್ಟಿಗೆಗಳು, ಪಟಬದ್ಧ ದೀರ್ಘದಂಡಾಂಕನರಾಶ್ರಯಮಠಗಳು (ಡೇರೆ, ಗುಡಾರಗಳು) ಭುಕ್ತಶಾಲೆಗಳು (ಊಟದ ಮನೆಗಳು),

ಕಂಪೆಸೆವ ಘಟಪೂರಿತ ಗಂಧ ಶೈತ್ಯೋದಕದ ಮರಗಳು, ದಾರಿಯ 'ಉಭಯ ತಟದ ಸಾಲು ಮಠಗಳು', ಪರಿಗಾಲುವೆಗಳು - ಒಂದೊಂದೂ ಕಣ್ಕಟ್ಟುವಂತಿವೆ. ತುಂಗಭದ್ರೆಯ (ಗೋಮತೀ) ಕಾಲುವೆಗಳಿಂದ ಪೋಷಿತವಾದ ಬೆಳ್ಗಬ್ಬುಗಳ ತೋಟಗಳು, ಆಲೆಮನೆಗಳು, ಪುಷ್ಕರಿಣಿಗಳು, ಹೊಂಗಳಸಗಳ ದೇಗುಲಗಳು - ಎಲ್ಲವೂ ನಮ್ಮನ್ನು ಸ್ವಾಗತಿಸುತ್ತವೆ. ಕಲಾವಿದರು ವಾಸವಾಗಿರುವ ಮನೆಗಳ ಚಿತ್ರಣವೂ ಸಾಕಷ್ಟು ವಿವರಗಳಿಂದ ಕೂಡಿದೆ.

ತಾಳ, ಮದ್ದಳೆ, ಆವುಜ, ಶ್ರುತಿ,
ಮುಖವೀಣೆ ಸಾಳಂಗ, ಶುದ್ಧಗಾನೆಯರ
ಮೇಳ, ನಟ್ಟುವ ನಾನಾ ವಿದ್ಯೆಗಳ
ಗಟ್ಟಿ- ವಾಳರ ಮನೆಗಳೊಪ್ಪಿದವು- (3-31.)

ಮುಂದೆ ವಿಜಯನಗರದ (ದ್ವಾರಕೆಯ) ರಾಜಧಾನಿಯನ್ನು ಬಳಸಿದ ಕೋಟೆಯ ಚಿತ್ರಣದಲ್ಲಿ ಕೊತ್ತಳ ನಿಚಯ, ತೆನೆ, ಆಳ್ವೇರಿ, ಹುಲಿಮೊಗ ಹೊನ್ನಗಸೆ, ಕವಾಟಗಳೆಲ್ಲ ಒಂದೊಂದಾಗಿ ವರ್ಣಿಸಲಾಗಿದೆ. ರಾಜಧಾನಿಯ ಬೀದಿಗಳಲ್ಲಿ ತಂಬುರಿಗರ, ಬೆಳ್ಳೆಲೆಯ ಅಂಗಡಿಗಳು, ಪುಷ್ಪದಂಗಡಿಗಳು, ಪಣ್ಪಸರಂಗಳು, ನಾನಾ ಧಾನ್ಯಗಳ ರಾಶಿಗಳು, ಚಿತ್ರಗೆಲಸಿಗಳ, ಚಿಪ್ಪಿಗರ ಅಂಗಡಿಗಳು, ಆಯುಧಮಾರುವವರ ಕೇರಿಗಳು, ಸಾಲು ಮಳಿಗೆಗಳು, ವಿವಿಧ ಉದ್ಯೋಗಗಳ ಪಾಂಚಾಳರು, ಕಂಚುಗಾರರು, ಕೈದುಗಾರರು, ಹೊಮ್ಮಂಚಗಾರರು, ಶಿಲ್ಪಿಗರು, ಸಂಚುಗಾರ (ವಾಸ್ತುವಿದ್ಯಾತಜ್ಞರು)ರು, ಸೊನ್ನಾರ (ಸ್ವರ್ಣಕಾರ)ರು. ತೇಟಿಗರು (ಒಪ್ಪಕೊಡುವವರು) ಸೆಟ್ಟಿಗಳು, ಚೆನ್ನವರದರು, ಸಾಗರ ವ್ಯಾಪಾರಿಗಳಾದ ಮರಕಾರರು - ಎಲ್ಲರೂ ಬೇರೆ ಬೇರೆಯಾಗಿ ಚಿತ್ರಿತರಾಗಿದ್ದಾರೆ. ವಿದ್ಯಾರ್ಥಿಗಳಿಗೆ ಕೂಳುವೀಳೆಯವಿತ್ತು ಪ್ರತಿದಿನ ಪಾಠ ಹೇಳುವ ವೈದಿಕ ಪಾಠಶಾಲೆಗಳು, ರಾಮಾನುಜ ವ್ಯಾಖ್ಯಾನ ಸುತತ್ತ್ವದ ಭೂಮಿಸುರರು, ತಳಿರುಗಾವೆಯ ಧೋತ್ರ, ಬಹಿರ್ವಾಸ, ಮೂಗಿಂದಿಳಿದ ನಾಮಗಳ ವೈಷ್ಣವರು, ಜಪದ ಮಂಟಪದಲ್ಲಿ ಸಂದಣಿಸಿ ಕುಳಿತ ನಾಮ - ತಿರುಚೂರ್ಣಗಳ ದ್ವಿಜರು, ಭಾಳಲಾಂಛನದವರು, ಅದ್ದಿಕದವರು (ಸತ್ರದ ಅಧ್ಯಕ್ಷರು - ಪಾರುಪತ್ಯಗಾರರು) ಕನ್ನಡಕ ಧರಿಸಿದ ಲಿಖಿತಜ್ಞರು - ಎಲ್ಲರೂ 'ಮೋಹನತರಂಗಿಣಿ'ಯಲ್ಲಿ ಕಾಣಸಿಗುತ್ತಾರೆ-

ವಾರನಾರಿಯ ಮೊಳೆಮೊಲೆಗಳನ್ನು ನೋಡಿನಗುತ್ತ ದೆರಳುಗಳ ಚಿಟುಕೊತ್ತಿ ಬಳೆದೊಡಿಸುವ ಬಳೆಗಾರರ ರಸಿಕತೆಯೊಂದಿಗೆ-

ಜೇನು, ಸಕ್ಕರೆ, ಕ್ಷೀರ, ರಸವಪ್ಪ
ಫೇಣಿ ಸುಖೀನುಂಡೆ, ವಡಿಗಾರಿಗೆಯ

ನಾನಾ ಭಕ್ಷ್ಯ ಭೋಜ್ಯಂಗಳ ಪರಮ
ಸುಮ್ಮಾನದೆ ಬಡಿಸಿವರೊಲಿದು (೩-೫೨)

ಎನ್ನುತ್ತ, 'ಹುಳಿದಾಳಿದ ಸಾರು' ಎಂದು ತಿಗುಳ (ತಮಿಳ)ರ ಸಾರಿನ ವೈಶಿಷ್ಯವನ್ನು - ವಿವಿಧ ವಿವರಗಳೊಂದಿಗೆ ಎತ್ತಿ ಹೇಳಲಾಗಿದೆ. ಬಹಿಃಸ್ಥಳಕ್ಕೂ ಸುಳಿದ ಒಗ್ಗರಣೆಯ ಕಂಪು ಸೂಸುವ ವಿವಿಧ ಭಕ್ಷಭೋಜ್ಯಗಳನ್ನು 'ಪತ್ರಭಾಜನ' (ಬಾಳೆಲೆಯಿಂದ ಮಾಡಿದ ತಟ್ಟೆ, ದೊನ್ನೆ) ಗಳಲ್ಲಿ ತುಂಬಿ - ಅನಲಾಕೃತಿಯ ಬ್ರಾಹ್ಮಣರು 'ಕೃಷ್ಣಾರ್ಪಿತ'ವೆಂದು ಆ ಪೋಶನಕೊಂಡು - ಉಂಡ ದೃಶ್ಯವು ರೋಚಕ.

ಹಾಗೆಯೇ, ಕನಕದಾಸರು ವರ್ಣಿಸಿದ ಶ್ರೀಕೃಷ್ಣದೇವರಾಯನ ಅರಮನೆಯ ವರ್ಣನೆಯೂ, ವಿಜಯನಗರದ ವೈಭವಕಾಲದ ಮುತ್ತಿನ ಚಾವಡಿ, ಜಂತದ ಚಾವಡಿಗಳನ್ನೆಲ್ಲ ಒಳಗೊಂಡಿದೆ. ಅಂತಃಪುರ, ಅಲ್ಲಿಯ ತೊಂಡೆವಾಯ ಪಾಠಕಿಯರು, ಸಂಬಳಿಗೆ ಗಾತಿಯರು, ಗಿಂಡಿಯವಳು, ಕಾಳಂಜಯವಳು, ಬೀಸಣಿಕೆಯವಳು, ಚಾಮರದವಳು, ಸಂಗೀತದವಳು - ಹೀಗೆ ಬಾಪತ್ತರ (೭೨) ನಿಯೋಗ (ಊಳಿಗ)ದವರ ಚಿತ್ರಣವೂ ಬಂದಿದೆ.

ಅನಿರುದ್ಧನ ನಗರ ಶೋಧನೆಯ ಪ್ರಕರಣದಲ್ಲಿ ಸೂಳೆಗೇರಿ, ಮದ್ಯಪಾನಗೋಷ್ಠಿ -- ಅಲ್ಲಿನ ಸಂಡಿಗೆ, ಸಂಭಾರಗಡಲೆ, ಪ್ರಾಸಕ (ಮಾಂಸವಿಶೇಷ?) ಕುಕ್ಕುಟಾಂಡ (ಕೋಳಿ ಮೊಟ್ಟೆ) ಅವಲಕ್ಕಿದುಂಡರಳುಗಡಲೆ ಎಲ್ಲವೂ - ಕನಕದಾಸರ ಸಮಕಾಲೀನ ಚಿತ್ರಗಳೇ. ಪಹರೆಯವರು, ತಳವಾರರು, ಕಾಪಿನವರು, ಜೂಜಿನಾಟದವರು, ಅಶ್ವಶಾಲೆಯವರು, ಗಜಶಾಲೆಯವರು - ಎಲ್ಲರೂ ಕಾವ್ಯದಲ್ಲಿ ಬರುತ್ತಾರೆ. ಸೇನೆಯನ್ನು ವರ್ಣಿಸುತ್ತಾ-

ರಾಜರು, ರಕ್ಕಸಾಮಂತರು ಲಾಳಿ ಜೆಲ್ಲೋಜರು ಪೆಟಲಂಬಿನವರು
ತೇಜೋಮಯ ಬಾಣಗಾರರೇರಿತು ಖಗರಾಜ ನೆರಂಕೆಯಿಕ್ಕೆಲದಿ
(೩೬೪೨)

- ಎಂದಿದ್ದಾನೆ ಕವಿ. ಇಲ್ಲಿ ಉಲ್ಲೇಖಗೊಂಡ ಪೆಟಲಂಬಿನವರು ಎಂದರೆ ತುಫಾಕಿಯವರು. ತುಫಾಕಿಯ ಸೈನ್ಯವನ್ನು ರಾಯಚೂರು ಕಾಳಗದಲ್ಲಿಯೇ ಶ್ರೀಕೃಷ್ಣ ದೇವರಾಯನು ಮೊದಲು ಉಪಯೋಗಿಸಿದನೆಂಬುದಕ್ಕೆ ಐತಿಹಾಸಿಕ ಆಧಾರಗಳಿವೆ. ಹಾಗೆಯೇ ಮೋಹನತರಂಗಿಣಿಯಲ್ಲಿ ರತಿ ಪ್ರದ್ಯುಮ್ನರ ಗೃಹಪ್ರವೇಶ ಅನಿರುದ್ಧ ಜನನ ಆನಂದ ಸಂವತ್ಸರದ ಮಾಘಶುದ್ಧ ಪಂಚಮಿ ಆದಿವಾರ ಸ್ವಾತಿನಕ್ಷತ್ರಕಾಲನಿರ್ದೇಶಕ ತಿಥಿ - ವಿವರಗಳು ಇವೆ. ತಿಥಿ ವಾರಗಳು ರತಿಪಂಚಮಿ ದಿನವಾಗಿದ್ದು ಕ್ರಿ.ಶ. ೧೫೫೩-೫೪ ಇವೆರಡೂ ವರ್ಷಗಳ ಮಾಘಶುದ್ಧ ಪಂಚಮಿಗೆ ಸರಿಹೊಂದುತ್ತವೆ. ಮೂಲ ಸಂಸ್ಕೃತ ಕೃತಿಯಲ್ಲಿಲ್ಲದ ಇಂತಹ ವಿವರಗಳನ್ನು ದಾಸರು ತಮ್ಮ ಕಾವ್ಯದಲ್ಲಿ-

ಹೇಳಿದ್ದು, ಕಾವ್ಯರಚನೆಯ ಕಾಲವನ್ನು ಸೂಚಿಸುವುದಕ್ಕಾಗಿಯೇ ಇರಬೇಕು (ನೋಡಿ- ರಂ. ಶ್ರೀ. ಮುಗಳಿ - ಕನಕದಾಸರು - ಲೇಖನಸಂಕಲನ - 'ತವನಿಧಿ'ಯಲ್ಲಿ - ಉಪಾಸಾ ಹಿತ್ಯಮಾಲೆ, ಮೈಸೂರು - ೧೯೫೭).

ಕನಕದಾಸರ ಸಮಕಾಲೀನರಾಗಿದ್ದು - 'ಮೋಹನತರಂಗಿಣಿ'ಯಲ್ಲಿ ಉಲ್ಲೇಖಿತ ರಾದ ಮಹಾವ್ಯಕ್ತಿಗಳು- ಶ್ರೀ ರಾಮಾನುಜೀಯರಾದ ಶ್ರೀ ತಾತಾಚಾರ್ಯರು. (ಸಂಧಿ ೧-೪) ಇವರು ತಿರುಮಲೆ ತಾತಾಚಾರ್ಯರು, ವಿಶಿಷ್ಟಾದ್ವೈತ ವೇದಾಂತದಲ್ಲಿ ವಿಶಾರದ, ಅರವೀಡು ವಂಶದವರಿಗೆ - ಎಂದರೆ ಆಳಿಯರಾಮರಾಯನಿಗೆ ಗುರುಸ್ಥಾನದಲ್ಲಿ ವಿಜ ಯನಗರದಲ್ಲಿಯೇ ಇರುತಿದ್ದರು.

ಇನ್ನೊಬ್ಬರು - ತ್ರಿವಿಕ್ರಮದಾಸರು - (ಸಂಧಿ ೨೬-ಪದ್ಯ೧) ಎಂದರೆ ತ್ರಿವಿಕ್ರಮ ದೇವರನ್ನು ಉತ್ತರ ದೇಶದ ಕಾಶೀಪ್ರಾಂತದಿಂದ ತಂದು ಸೋದೆಯಲ್ಲಿ ಪ್ರತಿಷ್ಠಾಪಿ ಸಿದ ಸೋದೆಮಠದ ಶ್ರೀ ವಾದಿರಾಜತೀರ್ಥರು. ಉಡುಪಿಯ 'ಕನಕನಕಿಂಡಿ'ಯಿಂ ದಾಗಿಯೂ ಶ್ರೀ ವಾದಿರಾಜರು ಕನಕದಾಸರ ಸಮಕಾಲೀನರೆನ್ನುವುದು ಖಚಿತವಾಗಿದೆ. ಹಾಗೆಯೇ ಅವರು ಸ್ಮರಿಸಿದ ತಮ್ಮ 'ಗುರುರಾಯ'- ಶ್ರೀ ರಾಮಾನುಜ ಮುನಿ, ಕವಿಗಳಾದ ಕುಮಾರವ್ಯಾಸ, ಕುಮಾರ ವಾಲ್ಮೀಕಿ - ಇವರೆಲ್ಲ ದಾಸರ ಕಾಲದ ಹಿಂದಣಗಡುವನ್ನು ತಿಳಿಯಲು ಸಹಾಯಕರಾಗುತ್ತಾರೆ.

ಹೀಗೆ 'ಮೋಹನತರಂಗಿಣಿ'ಯ ಕಥೆ ಪೌರಾಣಿಕವಾಗಿದ್ದರೂ ಅದು ಸೃಷ್ಟಿ ಗೊಂಡ ಕಾಲದ ಐತಿಹಾಸಿಕ ಅಂಶಗಳನ್ನು ತನ್ನಲ್ಲಿ ಒಡಮೂಡಿಸಿಕೊಂಡದ್ದರಿಂದ ಅದರ ಮೌಲ್ಯ ಹೆಚ್ಚುವಂತಾಗಿದೆ.

ಪರಮಾತ್ಮನ ಸೃಷ್ಟಿಯಾದ ಈ ಪ್ರಪಂಚವನ್ನು ಪ್ರೀತಿಸದೆ ಕಣ್ತೆರೆದು ಅನುಭವಿ ಸದೆ - ಪರಮಾತ್ಮನನ್ನು 'ಭಕ್ತಿ' ಮಾಡುವುದು ಸಹಜವೆನಿಸೀತೆ? ಅಥವಾ - ಈ ಲೋಕ ವನ್ನು ದ್ವೇಷಿಸುವವನು, ಇದರ ಸೃಷ್ಟಿಕರ್ತನಾದ ಜಗನ್ನಾಯಕನನ್ನು ಪೂಜಿಸುವೆನೆಂದರೆ ಹೇಗಾದೀತು? ಮಗುವನ್ನು ಅಲ್ಲಗಳೆಯುವವನು - ತಾಯ್ತನವನ್ನು ಗೌರವಿಸುವುದು ಸಾಧ್ಯವಾದೀತೇ? -ಎಂಬಂತಹ ಜಿಜ್ಞಾಸೆಗಳಿಗೆ ನಮ್ಮನ್ನು ತೊಡಗಿಸುವುದರಿಂದಲೂ 'ಮೋಹನತರಂಗಿಣಿಗೆ' ನಮ್ಮ ಪ್ರಜ್ಞೆಯ ಸ್ತರದಲ್ಲೂ ಸ್ಥಾನಸಲ್ಲುತ್ತದೆ.

ಆಧುನಿಕ ವಿಮರ್ಶೆಯ ವರೆಗಲ್ಲಿನಲ್ಲಿ 'ಮೋಹನ ತರಂಗಿಣಿ'ಯ ಬಣ್ಣ ತುಸು ಮಸುಕಾಗಿ ಕಂಡರೂ, ಅದರಲ್ಲಿ ವ್ಯಕ್ತವಾದ ದಾಸರ ಹೃದಯವೈಶಾಲ್ಯ ಲೋಕಾನುಭವ ಪೂರ್ಣವಾದ ರಸಿಕತೆ, ಇಹ-ಪರಸಮನ್ವಯದೃಷ್ಟಿ, ಕೃತಿಯ ಐತಿಹಾಸಿಕ ಮೌಲ್ಯಗಳನ್ನು ಧಾರಾಳವಾಗಿ ಕೊಂಡಾಡಲೇಬೇಕು.

# ಕನಕದಾಸರ ಕೀರ್ತನೆಗಳಲ್ಲಿ
# ಸಾಮಾಜಿಕ-ಸಾಹಿತ್ಯಕ ಮೌಲ್ಯಗಳು

ಡಾ|| ಪಿ. ರಾಮಭಟ್ಟ
ಎಂ. ಜಿ. ಎಂ. ಕಾಲೇಜು, ಉಡುಪಿ.

ಜನಜೀವನದಂತೆ ಭಾಷೆ ಸಾಹಿತ್ಯಗಳೂ ಪರಿವರ್ತನಶೀಲ. ವೇದ ಉಪನಿಷತ್ತುಗಳಿಂದ ಪುರಾಣ ಲೌಕಿಕ ಸಾಹಿತ್ಯದೆಡೆಗೆ ಸಂಸ್ಕೃತ ವಾಙ್ಮಯದ ಬೆಳವಣಿಗೆಯಾದಂತೆ ಕನ್ನಡದಲ್ಲೂ ಪ್ರೌಢವಾದ ಚಂಪೂಪ್ರಬಂಧಗಳಿಂದ ದೇಸಿ ಸಾಹಿತ್ಯ ಮೊದಲಾಯಿತು. ಜ್ಞಾನವಾಹಕವಾದ ಭಾಷೆ, ಸಾಹಿತ್ಯ ಕೇವಲ ಒಂದು ವರ್ಗಕ್ಕೇ ಸೀಮಿತವಾಗಬಾರದು. ಅದು ಎಲ್ಲರಿಗೆ ನಿಲುಕಬೇಕು, ಎಲ್ಲರಿಗೂ ಪ್ರಯೋಜನವಾಗಬೇಕೆಂಬುದಕ್ಕಾಗಿ ಕಾಲ ಕಾಲದಲ್ಲಿ ಅದು ಸರಳ ಸುಲಭ ಮಾರ್ಗವನ್ನು ಹುಡುಕುತ್ತಾ ಹೋಯಿತು. ಪಂಡಿತರಿಗೆ ಮಾತ್ರ ಸಾಹಿತ್ಯವಾಗದೆ ಸಾಮಾನ್ಯರಿಗೂ ಅದು ಲಭಿಸುವಂತಾಗಬೇಕೆಂದೇ ಈ ಪರಿವರ್ತನೆ. ಈ ನಿಟ್ಟಿನಲ್ಲಿ ಸಾಹಿತ್ಯದ ಪರಿವರ್ತನೆಯ ಘಟ್ಟಗಳು - ಹಳಗನ್ನಡದ ಚಂಪೂ ಕಾವ್ಯ, ನಡುಗನ್ನಡದ ವಚನ, ದಾಸ ಸಾಹಿತ್ಯ ಅದಕ್ಕೂ ಮುಂದೆ ಹೊಸಗನ್ನಡದಲ್ಲಿ ಗದ್ಯಸಾಹಿತ್ಯ ರೂಪುಗೊಂಡಿವೆ. ನಡುಗನ್ನಡದ ವಚನ, ದಾಸಸಾಹಿತ್ಯಗಳು ಸಂಸ್ಕೃತದ ಅತಿರೇಕತೆಯನ್ನು ಬಿಟ್ಟು ಕನ್ನಡದ ಮಣ್ಣಿನವಾಸನೆಯನ್ನು ಪಡೆದು ಪಾಮರರಿಗೂ ನಿಲುಕುವಂತಾಗಿವೆ. ಇಂತಹ ಸಾಮಾಜಿಕ ಪ್ರಜ್ಞೆಗೆ ವೀರಶೈವ ವಚನಕಾರರೇ ಮೊದಲಿಗರು. ಛಂದೊಬಂಧದ ಗಂಧವನ್ನು ಮಾತ್ರ ಉಳಿಸಿಕೊಂಡು ಜನರ ಆಡುಮಾತಿಗೆ ಹತ್ತಿರವಾಗಿ ಭಕ್ತಿ, ಜ್ಞಾನ, ವೈರಾಗ್ಯ ಜೀವನ ಮೌಲ್ಯಗಳನ್ನು ಅವರು ಸಮರ್ಥಿಸಿದರು. ಇದೇ ಕಾರ್ಯವನ್ನೇ ದಾಸರು ಸಂಗೀತ ಮಾಧ್ಯಮದಿಂದ ಮುಂದುವರಿಸಿದರು.

ಸಂಗೀತ ಹೃದಯದ ಭಾಷೆ. ಮಾತು ಬುದ್ಧಿಯ ಭಾಷೆ. ಇವೆರಡು ಮಾತು - ಧಾತು. ಸಂಗೀತ - ಸಾಹಿತ್ಯ ಒಂದಾದುದು ದಾಸರಲ್ಲಿ. ಭಾಷೆ ತಿಳಿಯದಿದ್ದರೂ ಸಂಗೀತದ ನಾದ ತರಂಗವು ಹೃದಯವನ್ನು ಮಿಡಿದು ನೆಲೆಗೊಳ್ಳುತ್ತದೆ. ನಾದದ ಆಕರ್ಷಣೆಯಿಂದ ಸಾಮಾನ್ಯರಿಗೂ ಗ್ರಾಹ್ಯವಾಗಿ ಚಿರಸ್ಥಾಯಿಯಾಗುತ್ತದೆ. ದಾಸರು ಈ ರಹಸ್ಯವನ್ನು ಕಂಡುಕೊಂಡು ಪ್ರಯೋಗಕ್ಕೆ ತಂದರು. ಮಕ್ಕಳನ್ನು ಆಡಿಸುವಲ್ಲಿ, ಮೊಸರು ಕಡೆಯುವಲ್ಲಿ, ಅಕ್ಕಿ ಅರೆಯುವಲ್ಲಿ ಇಂದಿಗೂ ಹೆಂಗುಸರಲ್ಲಿ ದಾಸರ ಹಾಡುಗಳು ಉಳಿದಿರುವುದನ್ನು ನೋಡಿದರೆ ಈ ಮಾತಿನ ಸತ್ಯವು ಅರಿವಾಗುತ್ತದೆ. ಜೀವನದ ಕಷ್ಟಕಾರ್ಪಣ್ಯಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿದವರಿಗೆ ಇದನ್ನೇ ನಂಬಿರಬಾರದು, ಇದಕ್ಕಿಂತ ಮೇಲಿನ ಸತ್ಯವೊಂದುಂಟು, ಅದಕ್ಕಾಗಿ ಇದರ ಬಿಡುಗಡೆ ಅವಶ್ಯವೆಂದು ತೋರಿ ಅದಕ್ಕಾಗಿ ಭಕ್ತಿ ಜ್ಞಾನ ವೈರಾಗ್ಯಗಳನ್ನು ಹೃದಯಂಗಮವಾಗಿ ಬೋಧಿಸಿದರು. ತಮ್ಮ ನಿಲುವನ್ನು ಸಮರ್ಥಿಸಲು ಖಂಡನೆಮಂಡನೆ ಟೀಕೆ ಟಿಪ್ಪಣಿಗಳನ್ನು ಅವರು ಸಹಜವಾಗಿಯೇ ಮಾಡಿದ್ದಾರೆ.

ದಾಸ ಸಾಹಿತ್ಯ - ಉಗಮ - ಬೆಳವಣಿಗೆ :- ಹರಿದಾಸ ಸಾಹಿತ್ಯ ತುಂಬು ಹೊನಲಾಗಿ ಹರಿದ ಹದಿನಾರನೆಯ ಶತಮಾನದ ಕಾಲದಲ್ಲಿ ಇಡಿಯ ಭಾರತವೇ ರಾಜಕೀಯ ಧಾರ್ಮಿಕ ದೃಷ್ಟಿಯಿಂದ ಅಲ್ಲೋಲಕಲ್ಲೋಲವಾಗಿತ್ತು. ವೀರಶೈವ, ಇಸ್ಲಾಂ ಧರ್ಮಗಳು ಕರ್ನಾಟಕದಲ್ಲಿ ವೈದಿಕ ಪಂಥಕ್ಕೆ ಸವಾಲೊಡ್ಡಿದ್ದುವು. ಇವುಗಳಿಂದ ವೈದಿಕಪಂಥವನ್ನು ರಕ್ಷಿಸಲು, ಬೆಳಸಲು ವೈದಿಕಪಂಥದ ಮಧ್ವರಂತಹ ಆಚಾರ್ಯರು, ಹರಿದಾಸರು ಸೊಂಟಕಟ್ಟಿ ದುಡಿದರು. ವೀರಶೈವರ ಮಾದರಿಯಲ್ಲೇ ವೈಷ್ಣವ ಪಂಥದ ಚಳುವಳಿ ತೊಡಗಿತು.

ದಾಸಸಾಹಿತ್ಯಕ್ಕೆ ವೀರ ಶೈವರ ವಚನಗಳೇ ಪ್ರೇರಣೆಗಳೆಂದು ಹೇಳಲಾಗುತ್ತಿದ್ದರೂ ಅದಕ್ಕಿಂತಲೂ ಹಿಂದೆ ಹಾಡಿನ ಮಾಧ್ಯಮವನ್ನು ಸಾಹಿತ್ಯದಲ್ಲಿ ಬಳಸಿಕೊಂಡುದಕ್ಕೆ ನಿದರ್ಶನವಿದೆ. ಕವಿರಾಜ ಮಾರ್ಗದಲ್ಲಿ ಹೇಳಿರುವ ಪಾಡು, ಮೆಲ್ವಾಡು, ಬಾಜನೆಗಬ್ಬ ಇಂದು ಅನುಪಲಬ್ಧವಾದರೂ ಇಂತಹ ಒಂದು ಮಾದರಿಯೆನ್ನಬಹುದು. ಇದೇ ವೀರಶೈವರಲ್ಲಿ ಪದವಾಗಿ ಮತ್ತೆ ವಚನವಾಗಿ, ಹರಿದಾಸರಲ್ಲಿ ಕೀರ್ತನೆಯಾಗಿ ರೂಪುಗೊಂಡಿತು. ಶಿವಶರಣರ ಹಾಡುಗಳು ಹೇರಳವಾಗಿ ಸಿಗುತ್ತವೆ. ಹನ್ನೆರಡನೆಯ ಶತಮಾನದಲ್ಲಿ ಹಾಡುಗಳನ್ನು ಬರೆದವರಲ್ಲಿ ಸಕಲೇಶ ಮಾದರಸ, ಬಸವೇಶ್ವರ, ಅಲ್ಲಮಪ್ರಭು, ಚೆನ್ನಬಸವೇಶ್ವರ, ಸಿದ್ಧರಾಮ, ಅಕ್ಕಮಹಾದೇವಿ, ನೀಲಲೋಚನೆ ಇವರು ಪ್ರಮುಖರು. ಉಪಲಬ್ಧ ಹಾಡುಗಳಲ್ಲಿ ಸಕಲೇಶ ಮಾದರಸನ ಹಾಡುಗಳೇ ಪ್ರಾಚೀನ. ಈ ಹಿನ್ನೆಲೆಯಲ್ಲಿ "ಹನ್ನೆರಡನೆಯ ಶತಮಾನದಲ್ಲಿ ಕೀರ್ತನ ಸಾಹಿತ್ಯದ ಪರಂಪರೆ ಅಧಿಕೃತವಾಗಿ ಪ್ರಾರಂಭವಾಯಿತೆನ್ನಬಹುದು". "ಕೀರ್ತನ ಪ್ರಕಾರಕ್ಕೆ ಹನ್ನೆರಡನೆಯ ಶತಮಾನದ ಬಸವಾದಿ ಶಿವದಾಸರ ಗೀತಾಪ್ರಕಾರವು ಮೂಲವೂ ಮಾದರಿಯೂ ಆಗಿದ್ದಿತು." ಎಂದು ಶ್ರೀ ಎಲ್. ಬಸವರಾಜು ಅವರು ಅಭಿಪ್ರಾಯ ಪಡುತ್ತಾರೆ. ಈ ಪರಂಪರೆಗೆ ಕೀರ್ತನೆಗಳ ಮಹಾಪೂರವನ್ನೇ ಹರಿಸಿ ಸಮೃದ್ಧಗೊಳಿಸಿದವರು ಹರಿದಾಸರು.

ಹರಿದಾಸರಿಗೆ ಶಿವದಾಸರು ಪ್ರೇರಣೆಯಾದಂತೆ ಶಿವದಾಸರಿಗೂ ಬೇರೆ ಮೂಲವಿದ್ದಂತೆ ತೋರುತ್ತದೆ. ತಮಿಳುನಾಡಿನ ಶೈವಧರ್ಮ ಮತ್ತು ಕನ್ನಡನಾಡಿನ ವೀರಶೈವಧರ್ಮಕ್ಕೆ ಸಂಬಂಧವಿದೆ. 6-7-8 ನೇ ಶತಮಾನಗಳಲ್ಲಿ ಅಲ್ಲಿ ಪ್ರಸಿದ್ಧರಾಗಿದ್ದ ಶೈವ ಸಂತರೇ ನಮ್ಮ ವೀರಶೈವರ ಪುರಾತನರು. ಅವರು 'ತೇವಾರಂ' ಎಂಬ ಸ್ತೋತ್ರಗಳನ್ನು ರಚಿಸಿ ಹಾಡುತ್ತಿದ್ದರು. ಈ ತೇವಾರಂ ಸ್ತೋತ್ರಗಳೇ ಶರಣರ ಹಾಡುಗಳಿಗೆ ಮಾದರಿಯಾಗಿರುವ ಸಾಧ್ಯತೆ ಇಲ್ಲದಿಲ್ಲ. ಶೂನ್ಯಸಂಪಾದನೆಯಲ್ಲಿ ಸಿಗುವ ಶರಣರ ಪದಗಳು ತಮಿಳಿನ ತೇವಾರಂ ಸ್ತೋತ್ರಗಳನ್ನು ಹೋಲುತ್ತವೆಂದು ಶ್ರೀ ಚಿದಾನಂದಮೂರ್ತಿ ಅವರೂ ಅಭಿಪ್ರಾಯಿಸಿದ್ದಾರೆ. ತಮಿಳುನಾಡಿನ ಆಳ್ವಾರರ ಭಕ್ತಿ ಪ್ರಬಂಧಗಳನ್ನೂ ಇಲ್ಲಿ ನೆನಪಿಸಬಹುದು. ಆಳ್ವಾರರ ಪ್ರೇರಣೆ ಹರಿದಾಸರಿಗೆ ಇದೆಯೋ ಎಂಬುದು ವಿವೇಚನೀಯ. ಎಂತಲೇ ಡಾ. ಕೆ. ಜಿ. ಶಾಸ್ತ್ರಿಯವರು "ತಮಿಳಿನ ಆಳ್ವಾರರ ಭಕ್ತಿಪ್ರಬಂಧಗಳನ್ನು 'ದ್ರಾವಿಡ

ವೇದ' ಎಂದು ಕರೆದಂತೆ ಹರಿದಾಸರ ಕೃತಿಗಳನ್ನು 'ಕನ್ನಡ ವೇದ' ಎಂದು ಕರೆದರೂ ತಪ್ಪಲ್ಲ" ಎಂದು ಅಭಿಪ್ರಾಯಿಸಿದ್ದಾರೆ.

ಶ್ರೀ ಮಧ್ವಾಚಾರ್ಯರ ದ್ವಾದಶಸ್ತೋತ್ರದಿಂದ ಹರಿದಾಸಕೀರ್ತನೆ ಆರಂಭವಾಯಿತೆಂದು ಅಭಿಪ್ರಾಯವಿದ್ದರೂ ಅವರ ನೇರ ಶಿಷ್ಯರಾದ ನರಹರಿ ತೀರ್ಥರೇ (ಕ್ರಿ.ಶ. 1331) ಕೀರ್ತನ ಪರಂಪರೆಯ ಅದ್ಯ ಕೃತಿಕಾರರು. ಆದರೆ ಎ. ಪಿ. ಕರಮರಕರ್ ಮತ್ತು ಎನ್. ಬಿ. ಕಲಂದಾನಿ ಅವರ ಗ್ರಂಥದಲ್ಲಿ ಪಂಡರಾಪುರದ ವಿಠಲನ ಅರ್ಚಕನಾದ ಪುಂಡಲೀಕನೆಂಬವನು ದೊಡ್ಡ ಸಂತನೆಂದೂ, ಹರಿದಾಸರಲ್ಲಿ ಅದ್ಯನೆಂದೂ ಸೋಮೇಶ್ವರನ ಕ್ರಿ.ಶ. 1237 ರ ಶಾಸನದಲ್ಲಿ ಪುಂಡಲೀಕ ದೊಡ್ಡ ಸಂತನಾಗಿದ್ದ ಉಲ್ಲೇಖವಿದೆಯೆಂದೂ ಹೇಳಿದೆ. ಕಲಂದಾನಿ ಅವರು ಕೊಟ್ಟ ಹರಿದಾಸ ಪರಂಪರೆಯ ನಕ್ಷೆಯಲ್ಲಿ ಆ ಹೆಸರಲ್ಲದೆ ನರಹರಿ ತೀರ್ಥರಿಂದ ದೊಡ್ಡ ಬಳ್ಳಾಪುರದ ಗೋಪಾಲಕೃಷ್ಣದಾಸ (ಕ್ರಿ.ಶ. 1910) ನವರೆಗೆ ಅರುವತ್ತೈದು ದಾಸರ ಹೆಸರುಗಳಿವೆ. ಇವರ (ನರಹರಿತೀರ್ಥ) ಕೇವಲ ಮೂರು ಹಾಡುಗಳು ಮಾತ್ರ ದೊರೆಯುವುದಿದ್ದರೂ ಇವರ ಅನಂತರದ ಶ್ರೀಪಾದರಾಜ (ಕ್ರಿ. ಶ. 1492) ರಿಂದ ಈ ಪಂಥ ಬಲಿತು ಮುಂದೆ ಅವರ ಶಿಷ್ಯರಾದ ವ್ಯಾಸರಾಯ ಸ್ವಾಮಿಗಳಲ್ಲಿ (ಕ್ರಿ.ಶ. 1449-1539) ಇನ್ನೂ ಹರಡಿ ಹಬ್ಬಿತು. ಪೂಜೆಯ ಕಾಲಕ್ಕೆ ಭಾಗವತರ ಮುಖದಿಂದ ಕನ್ನಡದ ದೇವರ ನಾಮಗಳನ್ನು ಹಾಡಿಸುವ ಸಂಪ್ರದಾಯವನ್ನು ಪ್ರಪ್ರಥಮವಾಗಿ ಬಳಕೆಗೆ ತಂದವರು ಶ್ರೀಪಾದರಾಜರು. ಸಂಸ್ಕೃತದ ವೇದ ಮಂತ್ರಗಳಿಗೆ ಸಮವಾದ ಸ್ಥಾನವನ್ನು ಕನ್ನಡದ ಕೀರ್ತನೆಗಳಿಗೆ ಒದಗಿಸಿದಂತಾಯಿತು. ಹದಿನಾರನೆಯ ಶತಮಾನದ ವ್ಯಾಸರಾಯರ ನೇತೃತ್ವದಲ್ಲಿ ಕರ್ನಾಟಕದ ರಾಜಧಾನಿಯಾಗಿದ್ದ ವಿಜಯನಗರವನ್ನೇ ಕೇಂದ್ರವಾಗಿರಿಸಿಕೊಂಡು ಅವರ ಶಿಷ್ಯರಾದ ವಾದಿರಾಜ (1480-1600) ಪುರಂದರದಾಸ (1484-1564) ಕನಕದಾಸ (1508-1606) ಇವರು ದಾಸ ಸಾಹಿತ್ಯವನ್ನು ಹರಡಿ ಹಬ್ಬಿಸಿದರು. ಸಂಸ್ಕೃತದಲ್ಲಿ ಗ್ರಂಥದ ರಚನೆ ಮಾಡುವ ಪಂಗಡ ವ್ಯಾಸಕೂಟವೆಂದೂ, ಕನ್ನಡದ ಕೀರ್ತನೆಕಾರರ ಗುಂಪು ದಾಸಕೂಟವೆಂದೂ ತಿಳಿಯಲಾಯಿತು. ವ್ಯಾಸರಾಯರ ಕಾಲದಲ್ಲೇ ಎರಡೂ ಪಂಥಗಳು ಅವರ ಹೆಸರಲ್ಲೇ ಏಕೋದ್ದೇಶ ಸಾಧನೆಗೆ ಸೊಂಟ ಕಟ್ಟಿ ನಿಂತವು.

ಕರ್ನಾಟಕದ ಭಕ್ತಿ ಪಂಥದ ಈ ವಿರಾಡ್ರೂಪವನ್ನು ನೋಡಿದರೆ ಇದೊಂದು ಅದ್ಭುತ ಚಳುವಳಿ ಎನ್ನಿಸ ಬಹುದಾದರೂ, ಇಡೀ ಭಾರತದಲ್ಲೇ ಈ ಚಳುವಳಿ ಆ ಕಾಲದಲ್ಲಿ ಹಬ್ಬಿದ್ದಂತೆ ತೋರುತ್ತದೆ. ರಾಜಸ್ಥಾನದಲ್ಲಿ ರಾಮದಾಸ, ಮೀರಾಬಾಯಿ (ಕ್ರಿ.ಶ. 1600) ಪ್ರಯಾಗದಲ್ಲಿ ತುಳಸೀದಾಸ (1532-1623) ಕಾಶಿಯಲ್ಲಿ ಕಬೀರದಾಸ (1398-1518) ಬಂಗಾಳದಲ್ಲಿ ಶ್ರೀ ಕೃಷ್ಣ ಚೈತನ್ಯ (1485--1533) ಮತ್ತು ಘೂರ್ಜರ ದೇಶದಲ್ಲಿ ಆಂಧ್ರದ ವಲ್ಲಭಾಚಾರ್ಯ (1477-1531) ಮತ್ತು ಇವರ ಶಿಷ್ಯ ಸೂರದಾಸ, ಮಹಾರಾಷ್ಟ್ರದಲ್ಲಿ ಭಾನುದಾಸ (1448--1531) ಅವನ ಮೊಮ್ಮಗ ಏಕನಾಥ

(1548-1599) ದಾಸೋದಿಗಂಬರ (1551- 1616) ಇವರೆಲ್ಲಾ ಕರ್ಣಾಟಕದ ಭಕ್ತಿ ಪಂಥದ ಚಳುವಳಿಯ ಕಾಲದಲ್ಲೇ ಅಲ್ಲಲ್ಲಿ ಇದೇ ಕಾರ್ಯವನ್ನು ಮಾಡುತ್ತಿದ್ದವರು. ಹದಿನಾರನೆಯ ಶತಮಾನದಲ್ಲಿ ಭಕ್ತಿ ಸ್ತೋತ್ರವು ಕೋಡಿವರಿದು ಇಡಿಯ ದೇಶವೇ ಪಾವನವಾಯಿತು.

ಕನಕದಾಸರು :- ವ್ಯಾಸರಾಯರ ಶಿಷ್ಯಾಗ್ರೇಸರರೂ ಪುರಂದರ ದಾಸ ವಾದಿರಾಜರ ನಿಕಟವರ್ತಿಗಳೂ ಆದ ಕನಕದಾಸರು ಭಕ್ತ, ಕವಿ. ಅವರು ಪುರಂದರದಾಸರಂತೆ ಕೀರ್ತನೆಗಳನ್ನು ಮಾತ್ರವಲ್ಲದೆ ಮೋಹನ ತರಂಗಿಣಿ, ನಳಚರಿತ್ರೆಗಳೆಂಬ ಕಾವ್ಯಗಳನ್ನು ಭಕ್ತಿ ಪ್ರಧಾನವಾದ ಹರಿಭಕ್ತಿ ಸಾರ, ರಾಮಧಾನ್ಯಚರಿತೆ ಮತ್ತು ಮುಂಡಿಗೆಗಳನ್ನೂ ರಚಿಸಿದ್ದಾರೆ. ಕನಕದಾಸರು ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿದ್ದರೆಂಬುದರಿಂದ ಸ್ಥೂಲವಾಗಿ ಇವರ ಕಾಲವನ್ನು ಕ್ರಿ.ಶ. 1508-1606 ಎಂದು ನಿಗದಿ ಪಡಿಸಿದ್ದಾರೆ. ಕನಕದಾಸರ ಭಕ್ತಿ ಯೋಗ್ಯತೆಗಳಿಂದಲಾಗಿ ಹಲವಾರು ದಂತಕಥೆಗಳು ಹುಟ್ಟಿಕೊಂಡಿವೆ. ಬಾಳೆಹಣ್ಣು ತಿಂದುದು, "ನಾನು ಹೋದರೆ ಹೋದೇನು", "ಕನಕ ಕಿಂಡಿ", "ನಿಧಿ ಅಗೆದುದು" ಮೊದಲಾದ ಅನೇಕ ಕಥೆಗಳ ಸತ್ಯಾಂಶವೇನಿದ್ದರೂ ಅವೆಲ್ಲಾ ಅವರ ಮಹತ್ವವನ್ನು ಸಾರುತ್ತವೆ. ಧಾರವಾಡ ಜಿಲ್ಲೆ ಬಂಕಾಪುರ ತಾಲೂಕು ಬಾಡ ಗ್ರಾಮದ, ಆನೆಗೊಂದಿ ಸಂಸ್ಥಾನದ ಕೆಳಗೆ ಪಾಳಯಗಾರನಾಗಿದ್ದ ಬೀರಪ್ಪ ಇವರ ತಂದೆ, ತಾಯಿ ಬಚ್ಚಮ್ಮ. ತಾಯಿಯ ಹೆಸರು ಮಾಳಕ್ಕ ಎಂದೂ ಇದೆ. ತಿರುಪತಿಯ ವೆಂಕಟೇಶನ ಅನುಗ್ರಹದಿಂದ ಜನಿಸಿದ ಈತ ಎಳವೆಯಲ್ಲೇ ತಂದೆಯನ್ನು ಕಳಕೊಂಡ. ಬಾಡ ಗ್ರಾಮದಲ್ಲಿ ಜನಿಸಿ ಕೆಲಕಾಲ ಅಲ್ಲಿದ್ದು ಆಮೇಲೆ ಕಾಗಿನೆಲೆಗೆ ಹೋಗಿ ನೆಲಸಿರಬೇಕು. ಕನಕದಾಸರು ಕೆಲಕಾಲ ದೊರೆತನವನ್ನು ಅನುಭವಿಸಿದಂತೆ ಅವರ-

"ದೊರೆತನವ ಬಿಡಿಸಿ ಸುಸ್ಥಿರ ಮಾರ್ಗ ತೋರಿಸಿ
ನರ ಮಾತ್ರದವನ ನೆನೆದೆ ಹರಿಯೆ"

ಎಂಬ ಮಾತಿನಿಂದ ತಿಳಿಯುತ್ತದೆ. ಪಾಳೆಯಗಾರನಾದ್ದರಿಂದ ಒಳ್ಳೆಯ ಯುದ್ಧ ಚತುರರಿದ್ದರೆಂಬುದೂ-

ಕನಕ ದಳದಲಿ ಬಂದನೆಂದರೆ ಫೌಜು
ಕನಕು ಮನಕಾಗುವುದು.........
ಮೊನೆಗಾರ ಧಣಿಯೆಂಬಧ್ಯೆರ್ಯವ ಬಿಡಿಸಿ
ಸೇವಕನ ಮಾಡಿದೆ ಹರಿಯೆ"

ಎಂಬ ಅವರದೇ ಮಾತಿನಿಂದ ಸ್ಪಷ್ಟ. ಅವರ ವಾಸಸ್ಥಾನಗಳಾದ ಕಾಗಿನೆಲೆ, ಬಾಡಗಳ ಹೆಸರು ಅವರ ಕೀರ್ತನೆಗಳಲ್ಲಿ ಆಗಾಗ ಬರುತ್ತವೆ. ಅವರು ಹೋದ ಪುಣ್ಯಸ್ಥಳಗಳಲ್ಲಿ

ತಿರುಪತಿ, ದೇಲೂರು, ಉಡುಪಿ ಮೊದಲಾದವು ಪ್ರಧಾನವಾಗಿ ಬರುತ್ತವೆ. ತಿರುಪತಿಯ ತಿಮ್ಮಪ್ಪನ ಅನುಗ್ರಹದಿಂದ ಜನಿಸಿದ್ದರಿಂದ ತಿಮ್ಮಪ್ಪನೆಂದೇ ಹೆಸರಾದರೂ ಮುಂದೆ ನಿಧಿ ಸಿಕ್ಕಿ ಕಾಗಿನೆಲೆಯ ಆದಿಕೇಶವ ದೇವಸ್ಥಾನ ಸ್ಥಾಪಿಸಿದ ಮೇಲೆ 'ಕನಕ' ನೆಂಬ ಹೆಸರಾಯಿತೆನ್ನಲಾಗಿದೆ. ಕಾಗಿನೆಲೆಯ ಆದಿಕೇಶವನ ಅಂಕಿತದಲ್ಲೇ ಕೀರ್ತನೆಗಳನ್ನು ರಚಿಸಿದ್ದಾರೆ. ವ್ಯಾಸರಾಯರೇ 'ಕನಕ' ಎಂಬ ಅಭಿದಾನವನ್ನು ಕೊಟ್ಟರೆಂದೂ ಹೇಳಲಾಗಿದೆ. ಪುರಂದರ ದಾಸರ ಕಾಲಕ್ಕೆ ಹರಿದಾಸನು ತನ್ನ ಗುರುವಿನಿಂದ ಅಂಕಿತವನ್ನು ಸ್ವೀಕರಿಸಬೇಕೆಂದು ನಿಯಮ ಹುಟ್ಟಿಕೊಂಡಿತು. ಅದರಂತೆ ಗುರುಗಳಾದ ವ್ಯಾಸರಾಯರು 'ಕನಕ' ಎಂಬ ಅಂಕಿತ ಕೊಟ್ಟುದರಿಂದ ಕನಕದಾಸ ಎಂಬ ಹೆಸರಿನಿಂದಲೇ ಪ್ರಸಿದ್ಧರಾದರು ಎಂದು ತೋರುತ್ತದೆ.

ರಣದೊಳಗೆ ದೇಹವ ಖಂಡತುಂಡವ ಮಾಡಿ
ಋಣವನುತ್ತರಿಸಿ ಮರಣವ ತೋರಿದೆ

ಎಂಬ ಅವರ ಮಾತಿನಿಂದ ಯಾವುದೋ ಯುದ್ಧದ ಆಘಾತದಿಂದ ವೈರಾಗ್ಯ ಹೊಂದಿ ವಿಜಯನಗರದ ವ್ಯಾಸರಾಯರಲ್ಲಿಗೆ ಬಂದು ಅವರ ಶಿಷ್ಯನಾದಂತೆ ತೋರುತ್ತದೆ. ಕನಕದಾಸರು ಯಮಧರ್ಮರಾಜನ ಅಂಶದಿಂದ ದ್ವಾಪರದಲ್ಲಿ ವಿದುರನಾಗಿ ಕಲಿಯುಗದಲ್ಲಿ ಕನಕದಾಸರಾಗಿ ಜನಿಸಿದರೆಂದು ನಂಬಲಾಗಿದೆ. ಏನೇ ಇದ್ದರೂ ಕನಕದಾಸರು ಅಪ್ರತಿಮ ಭಕ್ತ, ಕವಿ. ಕನಕವನ್ನು ಬಿಟ್ಟ ಕನಕದಂತಹ ಶ್ರೇಷ್ಠದಾಸ ಎಂಬುದರಲ್ಲಿ ಸಂದೇಹವಿಲ್ಲ. ಕನಕದಾಸರ ಸಂಸಾರ ವೈರಾಗ್ಯ ದೇಶಸಂಚಾರದ ಲೋಕಾನುಭವ, ತತ್ವಜ್ಞಾನ, ಭಾಷಾ ಪ್ರಭುತ್ವ ಮೊದಲಾದವುಗಳಿಂದ ಕೂಡಿದ ಅವರ ಸಮಗ್ರ ವ್ಯಕ್ತಿತ್ವದ ಪರಿಚಯ ಅವರ ಕೀರ್ತನೆಗಳಿಂದಾಗುತ್ತದೆ. ಭವಿಯಾಗಿ, ಅನುಭಾವಿಯಾಗಿ ಅವರ ಅನುಭವ ಪರಿಪೂರ್ಣವಾಗಿದೆ. ಕುರುಬರ ಕುಲದಲ್ಲಿ ಹುಟ್ಟಿದ್ದರಿಂದ ಆಗಿನ ಕಡು ಜಾತಿನಿಷ್ಠ ಸಮಾಜದಲ್ಲಿ ನೀಚ ಜಾತಿಯವನೆಂದು ತಾವು ಪಡೆದ ಕ್ರೂರ ಅನುಭವವನ್ನು ಅವರು ಕೀರ್ತನೆಗಳಲ್ಲಿ ತೋಡಿಕೊಂಡಿದ್ದಾರೆ. ಸಮಾಜವನ್ನು ತೆರೆದ ಕಣ್ಣಿನಿಂದ ನೋಡಿ ವಿಮರ್ಶಿಸಿದ್ದಾರೆ. ಬಾಡದಾದಿ ಕೇಶವ, ಕಾಗಿನೆಲೆಯಾದಿ ಕೇಶವ, ದೇಲೂರು ಚೆನ್ನಿಗರಾಯ, ಶ್ರೀ ಚೆನ್ನಕೇಶವ, ವೇಲಾಪುರಿ ಚೆನ್ನ ಎಂಬ ಅಂಕಿತಗಳನ್ನು ಅವರ ಕೀರ್ತನೆಗಳಲ್ಲಿ ಕಾಣಬಹುದು.

ಕೀರ್ತನೆಗಳು, ಅವುಗಳ ಸ್ವರೂಪ :- ಮೋಕ್ಷಸಾಧನೆಗೆ ಭಕ್ತಿಯೇ ಸುಲಭಮಾರ್ಗವೆಂದು ಸಂತರೆಲ್ಲಾ ಸಾರಿದ್ದಾರೆ. ಶಂಕರಾಚಾರ್ಯರು ಕೂಡ ತಮ್ಮ ವಿವೇಕ ಚೂಡಾಮಣಿಯಲ್ಲಿ "ಮೋಕ್ಷಸಾಧನ ಸಾಮಗ್ರ್ಯಾಂ ಭಕ್ತಿರೇವ ಗರೀಯಸೀ" ಎಂದರು. ಪುರಂದರ ದಾಸರು-

"ಧ್ಯಾನವು ಕೃತಯುಗದಲ್ಲಿ
ಯಜ್ಞ ಯಾಗವು ತ್ರೇತಾಯುಗದಲ್ಲಿ
ಕೀರ್ತನೆ ಮಾತ್ರದಿ ಕಲಿಯುಗದಲ್ಲಿ
ಮುಕುತಿಯನ್ನೀವ ಪುರಂದರ ವಿಠಲ"

ಎಂದು ಭಕ್ತಿಯನ್ನೇ ಪ್ರಧಾನವಾಗಿಸಿ ನಾಲ್ಕು ಲಕ್ಷಕ್ಕೂ ಮಿಕ್ಕಿ ಕೀರ್ತನೆಗಳನ್ನು ರಚಿಸಿದರು. ತಾವು - ಭಗವಂತ, ತಾವು ಮತ್ತು ಸುತ್ತಣ ಲೋಕ ಇವರೊಳಗೇ ಹರಿದಾಸರ ಪರಿಕ್ರಮ ನಡೆದಿದೆ. ನವ ವಿಧ ಭಕ್ತಿಗಳಲ್ಲಿ 'ಕೀರ್ತನ' ಪ್ರಕಾರ ಸಂಗೀತ ಮಾಧ್ಯಮದಿಂದ ಭಗವಂತನನ್ನು ಮಾತ್ರವಲ್ಲ ಕೇಳುಗರನ್ನೂ ಸೆರೆ ಹಿಡಿದು ಒಲಿಸಿಕೊಳ್ಳುವುದು. ಸಂಸಾರದ ಕಷ್ಟಕೋಟಲೆಗಳಿಗೆ ಪರಿಹಾರವಿಲ್ಲದ್ದರಿಂದ ಪರಮಾತ್ಮನನ್ನೇ ಮರೆಹೋಗುವುದು ಭಕ್ತಿಯ ಕಾರ್ಯ. ಕೀರ್ತನೆಗಳಲ್ಲಿ ಪರಮಾತ್ಮನನ್ನು ನಾನಾ ವಿಧವಾಗಿ ಹೊಗಳಿ ಒಲಿಸಿ ಅವನ ಅನುಗ್ರಹವನ್ನು ಪಡೆಯುವುದು ಇದರ ಗಂತವ್ಯ. ಅಥವಾ ತಲ್ಲೀನತೆಯ ಭಕ್ತಿಯಲ್ಲಿ ಸರ್ವ ಇಂದ್ರಿಯಗಳ ವ್ಯಾಪಾರವು ಸ್ತಬ್ದವಾಗಿ ಮನಸ್ಸು ಕೇಂದ್ರೀಕೃತವಾಗುವುದರಿಂದ ಹೊರ ಪ್ರಪಂಚವೇ ಮರೆತು ಭಕ್ತಿಯೋಗದಲ್ಲಿರುವಾಗಲೇ ಒಂದು ರೀತಿಯ ಮೋಕ್ಷ ಅಂದರೆ ಬಿಡುಗಡೆ ಸಿದ್ಧಿಸುವುದು ಸುಳ್ಳಲ್ಲ. ಕೀರ್ತನೆಗಳಿಗೆ ಭಕ್ತಿಯೇ ಜೀವನಾಡಿಯಾದರೂ ಅವುಗಳಲ್ಲಿ ಜ್ಞಾನ, ವೈರಾಗ್ಯ, ಜೀವನದರ್ಶನ, ಸಮಾಜವಿಮರ್ಶೆ ಒಳಿತು ಕೆಡುಕುಗಳ ವಿವೇಚನೆ ಓತಪ್ರೋತವಾಗಿದೆ. ಈ ಸ್ವಾದು ರಸವನ್ನುಣಿಸುವ ಮಾಧ್ಯಮ ಸಂಗೀತ. ಸಾಹಿತ್ಯ ಸಂಗೀತಗಳ ಸಮರಸದ ಬೆರಕೆ ಕೀರ್ತನೆ. ಮಾತು ಧಾತುಗಳ, ಸಾಹಿತ್ಯ ಸಂಗೀತಗಳ ಸಮುಚಿತ ಮಿಶ್ರಣದ ರಸಪಾಕ ಯೋಜಕರು ಹರಿದಾಸರು. ಸಮಾಜದ ಅನೀತಿ, ಅಧರ್ಮ, ಅನ್ಯಾಯ, ಪೊಳ್ಳು ನಂಬಿಕೆ, ಡಂಭಾಚಾರ ಮೊದಲಾದವನ್ನು ಕಂಡು ರೋಸಿ ರೇಗಿದ ಹರಿದಾಸರು ಸಮಾಜ ಸುಧಾರಣೆಗಾಗಿ ಹಾಡುಗಳನ್ನು ಹಾಡುತ್ತಾ ಊರೂರು ಅಲೆದು ಬೋಧಿಸಿ ತಿದ್ದಲು ಹವಣಿಸಿ ಮನೆ ಮನೆಗೆ ಸರಸ್ವತಿಯನ್ನು ತಂದರು. ಭಕ್ತಿ ಸಮರ್ಥನೆ, ಸಮಾಜ ಸುಧಾರಣೆಗಳೇ ಕೀರ್ತನೆಗಳ ಉದ್ದೇಶ. ಮನೆಮನೆಗೆ 'ಸರಸ್ವತಿ'ಯನ್ನು ಮೊದಲು ತಂದವರು ಶಿವಶರಣರು. ಅನಂತರ ಹರಿದಾಸರು. ವೈಷ್ಣವ ಪಂಥದ ಹರಿದಾಸರು ಮಧ್ವಮತಾನುಸಾರವಾಗಿ ವಿಷ್ಣು ಸರ್ವೋತ್ತಮತ್ವವನ್ನೇ ತಮ್ಮ ಕೀರ್ತನೆಗಳಲ್ಲಿ ಸಾರಿದ್ದಾರೆ. ಆದರೆ ಕನಕದಾಸರ ಮೊದಲ ಕೀರ್ತನೆಗಳಲ್ಲಿ ಶ್ರೀ ವೈಷ್ಣವ, ಶೈವ ಮೊದಲಾದ ಇತರ ಪ್ರಭಾವಗಳನ್ನೂ ಕಾಣಬಹುದು. ಹರಿದಾಸರು ಪ್ರಾಯಶಃ ಮಧ್ವಸಿದ್ಧಾಂತದ ಅನುಯಾಯಿಗಳೇನೋ ನಿಜ. ಆದರೆ ಅವರ ಹಾಡುಗಳಲ್ಲಿ ಮತವನ್ನೂ ಮೀರಿದ ಮಾನವಧರ್ಮ ಮೌಲ್ಯಗಳು ತುಂಬಿರುವುದರಿಂದ ಮಾತಾತೀತವಾಗಿ ದಾಸ ಸಾಹಿತ್ಯ ಚಿರಸ್ಥಾಯಿಯಾಗಿದೆ. ಏಕಾಂತ ಭಕ್ತಿ, ನೀತಿಧರ್ಮ ಬೋಧನೆ, ಡಂಭಾಚಾರ, ಸಂಕುಚಿತ ಮನೋವೃತ್ತಿಗಳ ಖಂಡನೆ, ದೇವತಾಸ್ತುತಿ, ಹರಿನಾಮಸ್ಮರಣೆ, ಶಬ್ದ ಚಿತ್ರ, ಪದಲಾಲಿತ್ಯ, ಸಂಗೀತ ಗುಣ ಇವು ಕೀರ್ತನೆಗಳ ಮುಖ್ಯ ಗುಣಗಳು.

ಕೀರ್ತನೆಗಳಲ್ಲಿ ಮೊದಲು ಪಲ್ಲವಿ, ಅನುಪಲ್ಲವಿಯೂ ಇರಬಹುದು; ಬಳಿಕ ಪದ್ಯ ಲತ, ಮಂದಾನಿಲ, ಉತ್ಸಾಹ ರಗಳೆ, ಸಾಂಗತ್ಯ ಷಟ್ಪದಿಗಳ ಲಯಗಳೂ ಇರುತ್ತವೆ. ಅಂಶಗಣವೇ ಪ್ರಧಾನ. ಆದಿ, ಅಂತ್ಯ ಪ್ರಾಸವಲ್ಲದೆ ಮಧ್ಯಪ್ರಾಸವೂ ಸೇರಿ ಬೇರೆ ಬೇರೆ ತಾಳ ರಾಗ ಬದ್ಧವಾಗಿರುತ್ತವೆ. ದಾಸರ ಹಾಡುಗಳಲ್ಲಿ ಕೀರ್ತನೆ, ಸುಳಾದಿ, ಉಗಾಬೋಗವೆಂಬ ಪ್ರಭೇದಗಳಿವೆ.

## ಕನಕದಾಸರ ಕೀರ್ತನೆಗಳಲ್ಲಿ ಸಾಮಾಜಿಕ ಮೌಲ್ಯಗಳು

ಸಾಹಿತ್ಯವೆಂದರೆ ಜೀವನದರ್ಶನ. ಅದು ಸಮಾಜದ ಪ್ರತಿಬಿಂಬ. ಕವಿ ತಾನು ಕಂಡುಂಡುದನ್ನೇ ರಸವತ್ತಾಗಿ ಹೇಳುವ ವಾಕ್ಯವೇ ಕಾವ್ಯ. ಕನಕದಾಸರು ಆಳರಸರಾಗಿ ಸಂಸಾರಿಯಾಗಿ, ಯೋಧರಾಗಿ, ಸೇವಕರಾಗಿ, ಶಿಷ್ಯರಾಗಿ, ಭಕ್ತರಾಗಿ ಪಡೆದ ಅನುಭವಗಳು ಕಾವ್ಯಾತ್ಮಕ ಹಾಡುಗಳಾಗಿ ಭಾವಗೀತೆಗಳಾಗಿ ತಡೆಯಿಲ್ಲದ ನೀರ ಬುಗ್ಗೆಯಂತೆ ಚಿಮ್ಮಿವೆ. ಅವರು ಓಡಾಡಿದ ಮಣ್ಣಿನ ವಾಸನೆ ಅವರ ಹಾಡುಗಳಲ್ಲಿ ಘಮಘಮಿಸುತ್ತದೆ. ಸಮಾಜದ ಕೆಡುಕುಗಳನ್ನು ಕಟುವಾಗಿ ವಿಮರ್ಶಿಸುವಲ್ಲಿ ದೊಡ್ಡವರೆನ್ನುವವರಲ್ಲೂ ಕಂಡುಬರುವ ಡಂಭಾಚಾರವನ್ನು ಖಂಡಿಸುವಲ್ಲಿ ಅವರ ಎದೆಗಾರಿಕೆ ಕಟುನುಡಿ ನಿರ್ಭಯ. ದೋಧಕನ ಆವೇಶವಿದ್ದರೂ ವಿಚಾರ ಸ್ವಾತಂತ್ರ್ಯವಿದೆ. ಸೂಕ್ಷ್ಮ ನಿರೀಕ್ಷಣ ಶಕ್ತಿಯಿದೆ. ಕೆಲವೊಂದು ಉದಾಹರಣೆಗಳಿಂದ ಇವನ್ನು ಗಮನಿಸಬಹುದು.

ಸಂಸಾರ :- ಜೀವನದಲ್ಲಿ ಹಲವು ಕಷ್ಟಗಳನ್ನೆದುರಿಸಿದ ಅವರು ಸಂಸಾರ, ಈ ಜನ್ಮ ಹೇಯ ಎಂದು "ಹೇಸಿಕೆಯೊಳಿರ್ದ ಸಂಸಾರವೆಂಬುವ ಮಾಯಪಾಶದಿಂದಲಿ ಬಿಗಿವರೇ ಕೃಷ್ಣ" ಎಂದು ದೇವರಲ್ಲಿ ಕೇಳುತ್ತಾ ಇದು ಪೂರ್ವಜನ್ಮದ ಕರ್ಮಫಲ, ಬಿಡಲರಿಯದು, "ಮೀರಲಳವೋ ಮುನ್ನ ಮಾಡಿದ್ದುದನು" ಎಂದು ನಿಟ್ಟುಸಿರುಬಿಟ್ಟು

"ಕಷ್ಟಪಟ್ಟರು ಇಲ್ಲ ಕಳವಳಿಸಿದರಿಲ್ಲ - ಆದಿಕೇಶವರಾಯ
ಕೊಟ್ಟವರಿಗುಂಟು ಕೊಡದವರಿಗಿಲ್ಲ

ಎಂದು ಸಮಾಧಾನ ತಾಳುತ್ತಾರೆ. ದೇಹ ಮಲಮೂತ್ರ ವಾಸನೆಯ ಗೂಡಾರ. ಇದು ಕೊಂಪೆ-

ಎಲುವುಗಳು ತೊಲೆ - ಜಂತೆ ನರಗಳವು ಬಿಗಿದಂತೆ
ಬಲಿದ ಚರ್ಮವು ಮೇಲು ಹೊದಿಕೆಯಂತೆ
ಗಳಗಳನೆ ನುಡಿಯುವ ನಾಲಗೆ ಗಂಟೆಯುಲಿಯಂತೆ
ಕಂಡಿಗಳು ಒಂಬತ್ತು ಕಳ್ಳಬಂಟರೈವರು
ಅಂಡಲೆವುದೊತ್ತಿ ನಲಿವ ಷಡ್ವರ್ಗವು
ಮಂಡಲಕೆ ಹೊಸಪರಿಯು ಮನ್ಮಥನ ಠಾಣ್ಯವಿದು

ಮಂಡೆ ಹೋಗುವುದನ್ನು ಅರಿಯದೀ ಕೊಂಪೆ
ಕೊಂಪೆಯಲಿ ಶೃಂಗಾರ ಕೊಂಡಾಡಲಳವಲ್ಲ
ಪಥ ನಡೆಯದಯ್ಯ ಪರಲೋಕ ಕೈದುವಡೆ
ಮನ್ಮಥನೆಂಬ ಖಳನು ಮಾರ್ಗವ ಕಟ್ಟಿಸುಲಿಯುತಿರೆ

ಎಂದು ಕಾಮವನ್ನು ನಿಂದಿಸಿ ವನಿತೆಯರ ಕಾಯ ಕಾಂತಿಯನ್ನು-

ವನಿತೆಯರ ಕಾಯಕಾಂತಿಯ ಮಹಾದುರ್ಗದಲಿ
ಸ್ತನವೆಂಬ ಕಣಿವೆಯನು ಕಟ್ಟಿ ಸುಲಿಯುತಿರೆ
ಕಾಳಗದೊಳಿದಿರಿಲ್ಲ ಸುರವೃಂದದೊಳಗೆ ಕ
ಟ್ಟಾಳು ಮನ್ಮಥನು ಈ ಚಲದಂಕ ಬಿರುದು ಪೇಳಲೆನ್ನಳವೆ

ಎಂದು ತಿರಸ್ಕರಿಸುತ್ತಾರೆ. "ಬಂದಿರುವುದೆಲ್ಲಿ ತಾ ತಂದ ಸತಿಸುತರೆಲ್ಲಿ" ಎಂದು ತಿಳಿಯದೆ ಮನುಷ್ಯ ಭ್ರಮಿಸುತ್ತಾನೆ. ಸಂಸಾರವನ್ನು ಖಂಡಿಸಿರುವುದು ಅದರಲ್ಲೇ ಮೈಮರೆತಿರಬಾರದೆಂಬುದಕ್ಕಾಗಿ ಅಲ್ಲದೆ ಅದು ಬೇಡವೆಂದಲ್ಲ. "ಸುತ ಲಾಭದಿಂದ ಅಧಿಕ ಲಾಭವುಂಟೆ? ಸತಿಯಿಲ್ಲದವಗೆ ಸಂಪನ್ನತೆಯುಂಟೆ" ಎಂಬಲ್ಲಿ ಸತಿಸುತರು ಸಂಸಾರದಲ್ಲಿರಬೇಕೆಂಬುದೇ ಅವರ ಎಣಿಕೆಯೆಂಬುದು ಸ್ಪಷ್ಟ. ಆದರೆ "ನೋಡಿ ಮರುಳಾಗದಿರು ಪರ ಸತಿಯರ" ಎಂದು ಇಂದ್ರ, ಕೀಚಕ, ರಾವಣರ ಉದಾಹರಣೆಯಿಂದ ಎಚ್ಚರಿಸುತ್ತಾರೆ. "ಮಕ್ಕಳಿಲ್ಲದ ತಾಯಿ ಕೊಳೆತ ತೆಂಗಿನಕಾಯಿ", "ಮಕ್ಕಳ ಹಡೆವುದು ಪುಣ್ಯ" ಎನ್ನುತ್ತಾರೆ. ಹಾಗಾದರೆ "ಹೇಸಿಗೆ ಸಂಸಾರ" ಹೇಗಾಗಬೇಕು? ಆದರೆ "ಮಗನಿಂದೆ ಗತಿಯುಂಟೆ ಜಗದೊಳು ನಿಗಮಾರ್ಥಸಾರ ವಿಚಾರದಿಂದಲ್ಲದೆ" ಎಂಬುದು ಮೊದಲಿನ ಮಾತಿಗೆ ವಿರೋಧಾಭಾಸವಾಗಿ ತೋರಿದರೂ ವಿವೇಚಿಸಿದರೆ ಸತ್ಯ. ಮಕ್ಕಳಾಗದಿದ್ದರೆ ಆಗಲಿಲ್ಲವಲ್ಲಾ ಎಂದು ಹಂಬಲಿಸುವವರಿಗೆ ಈ ಮಾತು ಸಮಾಧಾನ ಕೊಡುತ್ತದೆ. ಸತ್ಯ, ಶಾಂತಿ, ದುರ್ವೃತ್ತಿ ನಿಗ್ರಹ, ಸಮಚಿತ್ತ ಎಂಬ ನಾಲ್ಕು ಮಕ್ಕಳಿದ್ದರೆ ಹೆತ್ತರೇನು ಹೆರದಿದ್ದರೇನು? ಎಂದು ಕೇಳುತ್ತಾರೆ. 'ಹೆತ್ತ ತಾಯಿಗಿಂತ ಮಿಗಿಲಿಲ್ಲ' ಎಂದು ತಾಯ ಶ್ರೇಷ್ಠತೆಯನ್ನು ಸಾರುತ್ತಾರೆ.

ಕೆಟ್ಟ ನಡತೆಯನ್ನು ಖಂಡಿಸುತ್ತಾರೆ :- ಲೆತ್ತ ಚದುರಂಗ ಪಗಡೆಯಾಟದ ವ್ಯಸನಕ್ಕೆ ಬಲಿ ಬಿದ್ದು ಅಸ್ತಮಾನವಾದರೂ ಏಳದಿರುವುದು, ಏಕಾದಶೀ ವ್ರತ ಮಾಡದೆ ನಿದುನಿದ್ರೆಮಾಡುವುದು, ಉತ್ತಮರು ಬಂದರೆ ಎದ್ದು ನಮಸ್ಕರಿಸದಿರುವುದು ಮರುಳು ಬುದ್ಧಿ. "ಉತ್ತಮ ಜನರು ಸುರೆಯನೀಂಟುವರೆ" ಎಂದು ಮದ್ಯಪಾನವನ್ನು ವಿರೋಧಿಸುತ್ತಾರೆ.

ನೀತಿಬೋಧೆ :- ಇದು ಕೀರ್ತನೆಗಳ ಬಹುಮುಖ್ಯ ಅಂಶ. ಕೆಟ್ಟದ್ದನ್ನು ನಿಷೇಧಿಸಿ ಒಳ್ಳೆಯದನ್ನು ಬೋಧಿಸಿ ಸಮಾಜವನ್ನು ಉದ್ಧರಿಸುವುದೇ ಅವರ ಧ್ಯೇಯ. ಅದಕ್ಕಾಗಿಯೇ ಅವರ ಜನ್ಮ ಮೀಸಲು "ಏನು ಇಲ್ಲದ ಎರಡು ದಿನದ ಸಂಸಾರ" ಇದು-

ತನು ನಿನ್ನದು ಜೀವನ ನಿನ್ನದು ರಂಗ
........ಮಾಯಾಪಾಶದ ಬಲೆಯೊಳಗೆ ಸಿಲ್ಕಿರುವಂಥ
ಕಾಯಪಂಚೇಂದ್ರಿಯಂಗಳು ನಿನ್ನವು

ಎಂದು ಎಲ್ಲವೂ ಪರಮಾತ್ಮನದ್ದೆಂದು ತಿಳಿದು, ಇರುವಾಗ ಇತರರಿಗೆ ಬೇಕಾದವನಾಗಿ ಬಾಳಬೇಕು. ಅದಕ್ಕಾಗಿ ಭಾಷೆ ಕೊಟ್ಟ ಬಳಿಕ ನಿಜವಿರಬೇಕು, ಕಳ್ಳತನ ಬೇಡ, ಉಳ್ಳವನೆಂದು ಉಬ್ಬಬೇಡ, ದೊರೆತನ ಬಂದಾಗ ಕೆಟ್ಟ ನುಡಿಯಬೇಡ, ಸಿರಿ ಬಂದಾಗ ಮರೆಯ ಬೇಡ, ಪರಸತಿಯ ನೋಡಬೇಡ, ದುರ್ಜನರನ್ನು ಕೂಡಬೇಡ, ಗರ್ವದಿಂದ ಮಾತಾಡಬೇಡ, ಕೈಹಿಂದೆಗೆವ ಲೋಭವಿನ್ನು ಬೇಡ ಬೇಡ ಎಂಬ ಅವರ ಬೋಧನೆ ಸಮಾಜಕ್ಕೆ ಮಾರ್ಗದರ್ಶಕ ಸೂತ್ರ. "ಸತ್ತು ಹೋದ ಮೇಲೆ ಮತ್ತೆ ನಿಮ್ಮ ಅರ್ಥ ಯಾರಿಗೋ ಏನೋ" ಆದ್ದರಿಂದ ಲೋಭಿಯಾಗದೆ "ಹಸಿದು ಬಂದವರಿಗೆ ಅಶನವೀಯಲು ಬೇಕು" ಎನ್ನುತ್ತಾರೆ. ಅವರು ಜೀವನದ ನಶ್ವರತೆಯನ್ನು ತೋರಿಸುವುದು ಅದು ಶಾಶ್ವತವೆಂದು ಭ್ರಮಿಸದೆ ಚೆನ್ನಾಗಿ ಬಾಳಬೇಕೆಂಬುದಕ್ಕಾಗಿ ಎಂದಿಲ್ಲಿ ಸ್ಪಷ್ಟ. "ದುರ್ಜನರ ಸಂಗವನೊಲ್ಲೆ ಸಜ್ಜನರ ಸಂಗದೊಳಿರಿಸೆನ್ನ" ಎಂದು ಯಾರು ಯಾರು ದುರ್ಜನರೆಂಬ ಪಟ್ಟಿಯನ್ನೇ ಕೊಟ್ಟು ಅವಿನೀತ ಪುತ್ರ, ವಿಶ್ವಾಸ ಘಾತಕಿ, ವಿಷಯಲಂಪಟ, ಲೋಭಿಗಳನ್ನು ನಿಂದಿಸುತ್ತಾರೆ. ಸತ್ಯವಂತರ ಸಂಗವಿದ್ದರೆ ತೀರ್ಥವೇಕೆ? ಎಂದು, ಅರಿವು, ಜನ್ಮ ಮಕ್ಕಳು, ಸತಿ ಹೇಗಿರಬೇಕು ಎನ್ನುವುದನ್ನು ವಿವರಿಸುತ್ತಾರೆ. ಸನ್ನೆಯರಿತು ನಡೆಯದಂಥ ಸತಿಯಿದ್ದೇತಕೆ ಎಂದು ಕೇಳುತ್ತಾರೆ. ಹೆಂಡತಿ ಯಾದವಳು ಗಂಡನ ಇಂಗಿತವನ್ನರಿತು ವರ್ತಿಸಬೇಕು. ಕೂಲಿಯಾಳಿನಂತೆ ಹೇಳಿ ಕೆಲಸ ಮಾಡುವುದಲ್ಲ ಇದು ಸುರಸ ಸುಖ ದಾಂಪತ್ಯದ ಗುಟ್ಟು ಎಂಬುದನ್ನು ಯಾರು ತಾನೇ ಮೆಚ್ಚುವುದಿಲ್ಲ. ಪರನಿಂದೆಗಿಂತ ಪಾಪವಿಲ್ಲ ಎನ್ನುತ್ತಾರೆ. ಹೆಣ್ಣು ಗಂಡು, ಅರಸು, ತಾಯಿ, ಭೃತ್ಯ ನಂಟ, ಬಂಟ ಹೇಗಿರಬೇಕೆಂದು ಬೋಧಿಸುತ್ತಾರೆ.

ಸತ್ಯವ್ರತವುಳ್ಳವಗೆ ಮೃತ್ಯುವಿನ ಭಯವುಂಟೆ?
ಚಿತ್ತಶುದ್ಧಿಯುಳ್ಳವಗೆ ಮತ್ತೆ ಜನ್ಮವುಂಟೆ?
ವಿತ್ತವನರಸುವಂತೆ ಮುಕ್ತಿಯೆಂಬುದುಂಟೆ?
ಉತ್ತಮರ ಸಂಗದಿಂದ ಅಧಿಕ ಧರ್ಮವುಂಟೆ?
............ಪಿಸುಣನಿಗಿಂತ ಅಧಿಕ ಹೀನರುಂಟೆ?
............ಹರಿಭಕ್ತಿ ಯಿಲ್ಲದವಗೆ ಪರಲೋಕವುಂಟೆ?
............ಪರನಿಂದೆಗಿಂತ ಪಾಪವುಂಟೆ?

ಎಂದು ಕೇಳುತ್ತಾರೆ. "ಧನ ಲಾಭದಿಂದ ಅಧಿಕ ಲಾಭವುಂಟೆ", ಎಂದು ಕೇಳಿದ ಅದೇ ಹಾಡಿನಲ್ಲಿ "ವಿತ್ತವನರಸುವಂಗೆ ಮುಕ್ತಿಯುಂಟೆ" ಎಂದು ಕೇಳಿರುವುದು ವಿರೋ

ಧಾಭಾಸವಾಗಿ ಕಾಣಬಹುದಾದರೂ ಹಣ ಜೀವನಕ್ಕೆ ದೇಕು, ಅದರ ಸಂಪಾದನೆಯೇ ಜೀವನದ ಗುರಿಯಾಗಿ ಅದಕಿಂತ ಮೇಲಿನದನ್ನು ಮರೆಯಬಾರದು ಎಂದು ತಿಳಿದರೆ ವಿರೋಧ ಪರಿಹಾರವಾಗುತ್ತದೆ.

ಕನಕದಾಸರು ಕಂಡಂತೆ ಕಲಿಕಾಲದ ಅಂದರೆ ನಾವು ಜೀವಿಸುವ ಈ ಕಾಲದ ನೀತಿ ನಡತೆಗಳ ವಿಪರೀತ ಉಪರಾಟಿಗಳನ್ನು ನೋಡಿ - ಅತ್ತೆಯೇ ಸೊಸೆ, ಮಗನೇ ತಂದೆ ಯಂತೆ ವರ್ತಿಸುತ್ತಾನೆ ಹಾಗೆಯೇ ಹೆಂಡತಿಯೇ ಗಂಡ ನಂತೆ ನಡೆಯುವುದು ಒಲಿದ ಹೆಂಡತಿಯನ್ನು ಬಿಟ್ಟು ಸೂಳೆಯನ್ನು ನಂಬುವುದು, ಆಳಿದೊಡೆಯನಿಗೆ ಎರಡೆ ಣಿಸುವುದು, ಅಂಥವರಿಗೆ ಮಾಳಿಗೆ ಮನೆ ಧನಧಾನ್ಯ ಸಮೃದ್ಧಿ, ಪತಿವ್ರತೆಯರೆಂಬವರು ಶತಸಹಸ್ರದ ಲೊಂದು, ನಿತ್ಯದ ಕಳವು ವ್ಯಭಿಚಾರವುಳ್ಳವರೆಲ್ಲ ಅರ್ಥ ಸಂಪನ್ನರಾಗುತ್ತಾರೆ, ವೇದ ವಿಪ್ರರು ವೃತ್ತಿ ಸ್ವಾಸ್ಥವನ್ನು ಕಳೆದು ತಿರಿದು ತಿಂಬ ಉಂಡಾಡಿಗಳಾಗಿದ್ದಾರೆ. ಹರಿಹ ರರ ಪೂಜೆ ಹಗರಣವಾಗಿದೆ, ಉತ್ತಮರ ಜೀವನಕ್ಕೆ ದಾರಿಯೇ ಇಲ್ಲ. ಸತ್ಯಧರ್ಮಗಳೆಲ್ಲಾ ಎತ್ತ ಹೋದುವೊ ಈ ಕಲಿಯುಗದ ಮಹಿಮೆಯನ್ನು ನುಡಿಯಲೆನ್ನಳವಲ್ಲ ಎಂದು ಕೈಮ ಗುಚಿ ಈ ಭೂಭಾರ ಹೆಚ್ಚಿದೆಯೆಂದು ಅಸಹ್ಯ ಪಡುತ್ತಾರೆ. ಇಂದೂ ಇಂತಹ ವಿಪರೀತ ಉಳಿದುಕೊಂಡಿರುವುದರಿಂದ ಕನಕರು ಹೇಳಿದ ಮಾತು ಸತ್ಯವೆನಿಸುತ್ತದೆ. ಇಂತಹ ದುರ್ನಯವನ್ನು ಕಂಡು ವ್ಯಂಗದ ಕಟು ನುಡಿಯಿಂದ ತಿವಿಯುತ್ತಾರೆ. -ಈ ಕಾಲದಲ್ಲಿ ದಾನ ಧರ್ಮ ಬಿಟ್ಟವನೇ ಧರ್ಮಾತ್ಮ ಸಜ್ಜನರನ್ನು ಕಾಡುವವನೇ ಸತ್ಪುರುಷ, ಹಿರಿಯ ರನ್ನು ಬಯ್ಯುವವನೇ ನಿಷ್ಠ, ದೇವರನ್ನು ಸ್ಮರಿಸುವವನೇ ಅವಿಚಾರಿ ಎನ್ನುವಲ್ಲಿ ಅವರನ್ನೂ ಯಾರೋ ನಿಂದಿಸಿರಬೇಕೆಂದು ತೋರುತ್ತದೆ.

ಜಾತಿಯ ಮೇಲು ಕೀಳು :- ಭಾರತದೇಶಕ್ಕಂಟಿದ ಈ ವ್ಯಾಧಿ ಇಂದಿಗೂ ಉಳಿದು ಕೊಂಡು ಬಂದಿದೆ. ಶೈವ ವೈಷ್ಣವ ಸಂತರೆಲ್ಲಾ ಖಂಡಿಸಿಯೂ ಕನಕರ ಕಾಲದಲ್ಲೂ ಇದು ಪ್ರಬಲವಾಗಿತ್ತು. ಕೆಳಜಾತಿಯ ಕನಕರು ಅರಮನೆ, ಗುರುಮನೆ, ದೇವರ ಮನೆಗಳಲ್ಲೆಲ್ಲಾ ಇದನ್ನು ತಾವು ಸ್ವತಃ ಅನುಭವಿಸಿ ಕೆಂಡವಾಗಿ ನುಡಿಗುಂಡುಗಳನ್ನು ಕಾರಿದರು-

ಕುಲ ಕುಲ ಕುಲ ಎಂದು ಕೂಗುತ್ತಾರಲ್ಲ? ಕುಲೀನರೆನಿಸಿದವರು ಭೋಗಿಸುವ ಹಾಲು, ಕಮಲ ಎಲ್ಲಿ ಹುಟ್ಟುತ್ತದೆ? ಮಹಾ ಮೇಧಾವಿ ಋಷಿಗಳೆನಿಸಿದ ಪರಾ ಶರ ವಸಿಷ್ಠ, ನಾರದ ಇವರ ಕುಲವೇನೆಂದು ಸವಾಲು ಹಾಕುತ್ತಾರೆ ಭಕ್ತರಾದವರಿಗೆ ಮತ್ತೇನು ಕುಲವೆಂದು ಕೇಳುತ್ತಾರೆ ಜಾತಿಯಿಂದ ಕುಲವಲ್ಲ ಗುಣದಿಂದ ಕುಲ ಎಂದು ಹಲವಾರು ಉದಾಹರಣೆಗಳಿಂದ ಸಮರ್ಥಿಸುತ್ತಾರೆ. ನಾಡಾಡಿಯಾಗಿ ತಿರುಗುವ ಅವ ರನ್ನು ಯಾರೋ ಹುಚ್ಚ ಅಂದಿದ್ದರೇನೋ ಆದಿಕೇಶವನ ಹುಚ್ಚನಾದ ನನಗೆ ಇನ್ನೇನು ಕುಲ ಎಂದು ಕೇಳುತ್ತಾರೆ. "ಮುಟ್ಟಬಾರದವರ ಪಾಯಸು, ದೋಟಿಗೆ ನಿಲುಕದ ಹಣ್ಣು, ದಾರಿದ್ರ್ಯಕ್ಕೊದಗದ ಅರ್ಥ, ಶರೀರ ಸೌಖ್ಯ ಮನಕ್ಕಾಗದ ಹೆಣ್ಣು ಇದ್ದರೇನು ಇಲ್ಲದಿದ್ದ

ರೇನು, ಉಣ್ಣಬರದವರಲ್ಲಿ ಊರೂಟವಾದರೆ ಏನು ಎನ್ನುವಲ್ಲಿ ಅಸ್ಪೃಶ್ಯರಿಗೆ ಹೊರಗೆ ಅನ್ನವಿಕ್ಕುವುದನ್ನು ಟೀಕಿಸಿದ್ದಾರೆ. ಅಸ್ಪೃಶ್ಯನೆಂದು ದೂರವಿರಿಸಿ ಪಾಯಸದ ಊಟಕೊಟ್ಟ ಮಾತ್ರಕ್ಕೆ ಆತ್ಮೀಯತೆ ಉಂಟಾಗುವುದೆ? ಈ ಕಟಕಿ ಅವರ ಅನುಭವವೇ ಆಗಿರುವ ಸಂಭವವುಂಟು.

ಲೋಕವ್ಯವಹಾರ:- ಲೋಕಾನುಭವದ ಪರಿಪಾಕ ಕನಕರ ನುಡಿಯಲ್ಲಿ ಮಿಂಚುತ್ತದೆ. ಮತ್ತೆ ವಿರಾಗಿಗಳಾಗಿ ಎಲ್ಲವನ್ನೂ ಬಿಟ್ಟರೂ ಅವರಿಗೆ ಲೋಕವ್ಯವಹಾರ ಜ್ಞಾನ ಮೊದಲೇ ಆಗಿದೆ. ಅದನ್ನೂ ಅವರು ಮಾರ್ಮಿಕವಾಗಿ ಮನಮುಟ್ಟುವಂತೆ ಜ್ಞಾಪಿಸುತ್ತಾರೆ - ಬಡತನದ ಕಷ್ಟವನ್ನು ಕಂಡಕಂಡವರಲ್ಲಿ ಹೇಳಿ ಫಲವಿಲ್ಲ-

"ಅಡಿಗಡಿಗೆ ಶೋಕದಲಿ ಅವರಿವರಿಗುಸುರಿದರೆ
ಬಡತನವು ಬಿಟ್ಟು ಹಿಂಗುವುದೇನು ಮರುಳೆ"

ಎಂದು ಕೇಳುತ್ತಾರೆ. ತನ್ನ ದಾರಿದ್ರ್ಯವನ್ನು ತಡೆಯದೆ ದೂರಿಕೊಳ್ಳುವವರು ಇತರರ ದೃಷ್ಟಿಯಲ್ಲಿ ಇನ್ನೂ ಕೀಳಾಗುತ್ತಾರೆ. ಸಹಾಯ ಮಾಡುವವರಂತೂ ಇಲ್ಲ ಎಂಬ ವಸ್ತು ಸತ್ಯ ಮಾರ್ಮಿಕವಾಗಿದೆ "ತಾನು ಉಣ್ಣದ ಪರರಿಗಿಕ್ಕದ ಧನವಿದ್ದೇತಕೆ? ಎಂಬಲ್ಲಿ ದಾನ ಅಥವಾ ಭೋಗವೇ ಧನದ ಎರಡು ದಾರಿಗಳು ಎಂದು ಲೋಭ ಪ್ರವೃತ್ತಿಯವರಿಗೆ ಜ್ಞಾಪಿಸುತ್ತಾರೆ. ಸ್ವಾರ್ಥಿಗಳು ನ್ಯಾಯಾನ್ಯಾಯಗಳನ್ನೆಂದೂ ಯೋಚಿಸುವುದಿಲ್ಲ - "ಸ್ವಾರ್ಥಕೆ ನ್ಯಾಯವೆಂದಾದರೂ ಉಂಟೆ". ಕೊಡುವವರೇ ಇಲ್ಲ. ಕೊಟ್ಟು ಅದನ್ನು ಹೇಳುತ್ತಾ ಬರುವವ ಹೀನ ದಾತ ಎಂಬುದು ವಸ್ತು ಸತ್ಯ. ಮನಬಿಚ್ಚಿ ಕೊಟ್ಟವನು ಅದನ್ನು ಹೇಳಲಾರ. ಮನಸ್ಸಿಲ್ಲದೆ ಕೊಟ್ಟವನೇ ಅದನ್ನು ಡಂಗುರ ಸಾರುತ್ತಾನೆ. ಇಂಥವರು ಹೆಗ್ಗಳಿಕೆಗಾಗಿ ಕೊಡುವವರು ವ್ಯಕ್ತಿಯ ಉಪಕಾರಕ್ಕಾಗಿ ಅಲ್ಲ ಎಂಬಲ್ಲಿ ಸೂಕ್ಷ್ಮನಿರೀಕ್ಷಣೆಯಿದೆ. "ಕರಣಿಕರೊಳಗಿನ ನಂಟು ಕಟ್ಟಿದ ಹಣವಿನ ಗಂಟು" ಎಂಬಲ್ಲಿ ಕರಣಿಕರ ಅಂದರೆ ಗುಮಾಸ್ತರ (ಲೆಕ್ಕಪತ್ರದವರ) ಲಂಚಕೋರ ಪ್ರವೃತ್ತಿ ಸ್ಪಷ್ಟವಿದೆ. ನೆಲ್ಲುಕುಟ್ಟುವುದು, ವೇದವೋದುವುದು, ಹೋರಾಡುವುದು, ದೆಳೆ ದೆಳೆಸುವುದು, ಕದ್ದು ಹೊಡೆಯಿಸಿಕೊಳ್ಳುವುದು, ಸನ್ಯಾಸಿ ಜಂಗಮ ಜೋಗಿ ವೇಷ ತೊಡುವುದು ಎಲ್ಲಾ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ಎಂಬುದು ಕನಕರ ಮಾರ್ಮಿಕ ನುಡಿ, ಸತ್ಯನುಡಿ. "ಬೆಲೆ ಬಿದ್ದ ಸರಕಿನೊಳು ಲಾಭವುಂಟೆ" ಎಂಬುದು ಸಾಮಾನ್ಯರಿಗೂ ತಿಳಿಯುವ ವ್ಯವಹಾರ. ಹೆಣ್ಣುಕೊಟ್ಟ ಮಾವನ ಮನೆಯಲ್ಲಿರುವುದಕ್ಕಿಂತ ಸಾವುದೇ ಲೇಸು. ಒಂದು ತಿಂಗಳು ಗೌರವ ಮತ್ತೆ ಹಿತನುಡಿ, ಒಳಗೊಳಗೆ ಅಭದ್ರ ನುಡಿ ಸಣ್ಣಮಾತು, ಇಂತಹ ಅಳಿಯ ಭೋಜನಕ್ಕಿಂತ ಗೋಪಾಳವೇ ಲೇಸು ಎನ್ನುತ್ತಾರೆ. "ಶ್ವಶುರ ಗೃಹ ನಿವಾಸಃ ಸ್ವರ್ಗ ತುಲ್ಯೋ ನರಾಣಾಂ ಯದಿ ವಸತಿ ದಿನಾನಿ ತ್ರೀಣಿ ಪಂಚಾಥ ಸಪ್ತ" ಎಂಬ ಸಂಸ್ಕೃತ ವಾಕ್ಯ ಇಲ್ಲಿ ನೆನಪಾಗುತ್ತದೆ. "ಸಾಕು ಸಾಕು ಮನುಜ ಸೇವೆ ಮಾಡಿ ದೆಂದು ಬಳಲಿದೆನು" ಎಂಬಲ್ಲಿ ಮನುಷ್ಯರ

ಸೇವೆ ಮಾಡಿ ತೃಪ್ತಿಪಡಿಸಲು ಸಾಧ್ಯವಿಲ್ಲವೆಂಬುದು ಚಕ್ರವರ್ತಿಯ ಕೆಳಗೆ ಪಾಳಯಗಾರರಾಗಿದ್ದ ಅವರ ಸ್ವಾನುಭವವೇ ಇರಬೇಕು. "ತೇಜಿಯನೇರಿ ಕನೋಜರಾವುತನಾದೆ" ಎಂಬುದು ಅವರ ಸೇವೆಯನ್ನು ಸೂಚಿಸುತ್ತದೆ. "ಅಲ್ಪದೊರೆಗಳ ಜೀತ ಎಷ್ಟು ಮಾಡಿದರೇನು" ಎಂಬುದರಲ್ಲಿ ಆಗಿನ ಕಾಲದಲ್ಲೂ ಇದ್ದ ಜೀತದ ಸೂಚನೆಯಿದೆ, ಜೀತದಾಳುಗಳ ಯಾತನೆ ನೋವು ಇದೆ.

ಢಂಭಾಚಾರಕ್ಕೆ ಕೆಂಡನುಡಿ :- ದೇವರು ಧರ್ಮಗಳ ಹೆಸರಿನಲ್ಲಿ ಸಂಭಾವಿತರಂತೆ ತೋರಿಸಿಕೊಂಡು ಸ್ವಾರ್ಥಸಾಧಿಸುವ ಢಂಭಕರು ಯಾವ ಮತದವರೇ ಇರಲಿ ಅವರಿಗೆ ಕನಕರ ಚಾಟಿಯೇಟು ತಪ್ಪಿದ್ದಲ್ಲ. "ಸನ್ಯಾಸಿ ಜಂಗಮ ಜೋಗಿ ಜಟ್ಟಿ ಮೊಂಡ ಬೈರಾಗಿ ನಾನಾವೇಷಕೊಂಬುವುದು ಎಲ್ಲಾ ಹೊಟ್ಟೆಗಾಗಿ" ಎಂಬಲ್ಲಿ, "ಕೆಟ್ಟಕೂಗನೆ ಕೂಗಿ ಹೊಟ್ಟೆಯನು ಹೊರೆವಂಥ ಪೊಟ್ಟೆ ಗುಡುಮಗಳೆಲ್ಲ ಪರಮ ವೈಷ್ಣ ಎಂಬಲ್ಲಿ ತಮ್ಮ ಪ್ರೀತಿಯ ವೈಷ್ಣವ ಪಂಥದವರಲ್ಲೆ ಹೊಟ್ಟೆದೊಜ್ಜು ಬೆಳಸಿ ಧರ್ಮದ ಪ್ರದರ್ಶನ ಮಾಡುವವರನ್ನು ಅವರು ಹೀಗೆ ಬೈಯುವುದು ನೋಡಿದರೆ ಅವರ ನಿಷ್ಪಕ್ಷಪಾತತನಕ್ಕೆ ಬೇರೆ ಸಾಕ್ಷಿದೇಕೆ ? ಎಲ್ಲಾ ಮತದವರಲ್ಲೂ ಇಂತಹ ಆಷಾಢಭೂತಿಗಳಿದ್ದಾರೆ-

ಜಂಗಮಸ್ಥಾವರಗಳ ಹೊಲಬನರಿಯದ ಇಂಥ
ಭಂಗಿ ಮುಕ್ಕುಗಳೆಲ್ಲ ಲಿಂಗವಂತರಹುದೆ

ಎಂಬಲ್ಲಿ ಭಂಗಿ ಸೇದುವಲಿಂಗಾಯಿತರನ್ನು,

ಭವಿ ಮಾಡಿದ ಲಿಂಗ ಬಚ್ಚಿಟ್ಟು ಪೂಜೆಯಗೊಂಬ
ಕವಿಗಳು ಶರಣರು ಕೇಳಿ ಸಭೆಯೊಳಗೆ

ಎಂಬಲ್ಲಿ ಶಿವಶರಣರನ್ನು,

ಅಲ್ಲಾ ಖುದಾ ಎಂಬ ಅರ್ಥವನರಿಯದೆ
ಮುಲ್ಲಾ ಶಾಸ್ತ್ರದ ನೆಲೆಯ ಮುನ್ನರಿಯದೆ

ಎಂಬಲ್ಲಿ ಕಪಟ ಮುಲ್ಲಾಗಳನ್ನು, "ವೇಷಧಾರಿಗಳು ಸನ್ಯಾಸಿಗಳು ಅಹುದೆ" ಎಂಬಲ್ಲಿ ಠಕ್ಕರಾದ ಜೈನ ಹಿಂದೂ ಬೌದ್ಧ ಸನ್ಯಾಸಿಗಳನ್ನು,

ಮೂಗುಹಿಡಿಯುತೆ ನೀರೊಳಗೆ ಮುಳುಗಿ ಜಪಮಾಡಿ
ಭಾಗವತ ಶಾಸ್ತ್ರಗಳನೆ ಓದಿ ಬಾಗಿ
ಪರಸತಿಯನು ಬಯಸಿ ಕಣ್ಣಿಡುವಂಥ
ಯೋಗ ತಪ್ಪಿದವರೆಲ್ಲ ದೇವ ಬ್ರಾಹ್ಮಣರೇ

ಎಂಬಲ್ಲಿ ಸೋಗಿನ ಕಪಟ ಬ್ರಾಹ್ಮಣರನ್ನು ಅವರು ಟೀಕಿಸಿದ್ದಾರೆ. "ತೀರ್ಥ ಪಿಡಿದವರು ತಿರುನಾಮ ಧಾರಿಗಳೆ" ಎಂದು ಶ್ರೀ ವೈಷ್ಣವರನ್ನೂ ಬಿಡಲಿಲ್ಲ.

ಜಪವ ಮಾಡಿದರೇನು ತಪವ ಮಾಡಿದರೇನು
ವಿಪರೀತ ಕಪಟಗುಣ ಕಲುಷವಿದ್ದವರು

ಎಂಬ ನುಡಿಯಲ್ಲಿ ಮನಸ್ಸು ಬುದ್ಧಿ ಒಳ್ಳೆಯದಾಗದೆ ನಟನೆಯಿಂದ ಪರಮಾತ್ಮನ ಸಿದ್ಧಿಯಿಲ್ಲವೆಂದು ಒತ್ತಿಹೇಳುತ್ತಾರೆ. "ನೇಮವಿಲ್ಲದ ಹೋಮವೇಕೆ? ಅಂಬರ ತಾಂಬೂಲ ಬಿಡಲೇಕೆ ತೀರ್ಥಯಾತ್ರೆ ಏಕೆ? ಅಚಲಭಕ್ತಿ ನಿರ್ಮಲವಾಗಿದ್ದರೆ ಇವ್ಯೊಂದೂ ಬೇಡವೆಂದು ಮತ್ತೆ ಹೇಳುತ್ತಾರೆ. ಕಪಟ ದಿಗಂಬರ ಜೈನನಿಗೆ ಈ ಚಾಟಿ ತಾಗದೆ? ಇಂತಹ ಹೊರ ಆಡಂಭರ ಬೇಡ "ಗುಟ್ಟಿನಲ್ಲಿ ಗೋಪಾಲನ ಸ್ಮರಿಸೋ" ಎನ್ನುತ್ತಾರೆ.

ಕ್ಷುದ್ರದೈವಗಳ ಆರಾಧನೆ ಆ ಕಾಲದಲ್ಲೂ ಹೇರಳವಾಗಿದ್ದು ಆ ನೆವದಲ್ಲಿ ಪ್ರಾಣಿ ವಧೆ ಮದ್ಯಪಾನ ವೇಷಧಾರಣೆ, ಕುಣಿತ ಮೊದಲಾದ ಕಾಟಾಚಾರಗಳನ್ನು ಕಂಡು ರೋಸಿ ಹೋದ ಕನಕರು ಅಂಥವರನ್ನು ಮಾತಿನ ಮೊನೆಯಿಂದ ಚುಚ್ಚಿದ್ದಾರೆ. ಅಂಥ ದೈವಗಳನ್ನು ಅವಹೇಳನಮಾಡಿದ್ದಾರೆ. "ಕೊಂಡಾಡದಿರು ಬೀದಿಕೂಳುಂಬ ದೈವಗಳ"

"ಉರಿಮೋರೆ ಚಾಮುಂಡಿ ಶಕ್ತಿಗಳಿಗೆ
ಕುರಿಕೋಣ ನೈವೇದ್ಯಧೂಪದೀಪಗಳಿಗ್ಗಂದ .......ಪೂಜಿಸುವರಯ್ಯ"

ಇದು ಕಲಿಯುಗದ ಮಹಿಮೆ.

"ಎಕನಾತಿ ಎಲ್ಲಮ್ಮಮಾರಿ ದುರ್ಗಿ ಚೌಡಿಯರ
........ಕೊಂಬು ಹೋತು ಕುರಿಕೋಣನ ಬಲಿಗೊಂಬ
ಡೊಂಬೆ ದೈವಗಳನು ಭಜಿಸದಿರು ಮನವೆ"

ಎಂಬಂತಹ ಹಾಡುಗಳಲ್ಲಿ ಕೆಲವು ಕ್ಷುದ್ರ ದೇವತೆಗಳನ್ನು ಹೆಸರಿಸಿ ಹಳಿದಿದ್ದಾರೆ. ಅಂತಹ ದೈವದ ನೆಪದಲ್ಲಿ ವೇಷ ಕಟ್ಟಿಕುಣಿದು (ಬಹುಶಃ ಅವರು ಕಂಡ ಕೋಲ) ಮಾಂಸ ಮದ್ಯ ಸೇವಿಸಿ ಕಾಟಾಚಾರದ ಮಜಾ ಮಾಡುವುದನ್ನು

ಕುಳ್ಳಿನಿಂದ ಕುದಿಸಿತಿಂದು
ಕಳ್ಳಗಡಿಗೆ ಬರಿದು ಮಾಡೆ
ಜೊಳ್ಳು ದೇವರ ಗೊಡವೆ ಬೇಡ"

ಎಂಬ ಕಟಕಿ ನುಡಿ ಇರಿಯುತ್ತದೆ.

ಗಾಳಗೂಳರೆಲ್ಲ ಕೂಡಿ ತೂಳ ದೇವರ ಮಾತ ಕೇಳಿ
ಹಾಳ ಮಾಡಿ ಕೈಯೊಳಿದ್ದ ಹೊನ್ನು ಹಣಗಳ

ಬಾಳುತಿಪ್ಪ ಕುರಿಯ ಕೋಣವ ಬೀಳುಬೀಳು ಕೊರಳಕೊಯ್ಸಿ
ಬೀಳಬೇಡಿ ನರಕಕೆಂದು ಹೇಳ ಬಂದೆನೊ
ಸುತ್ತಲವರ ಮಾತ ಕೇಳಿ ಗುತ್ತಿಯ ಎಲ್ಲಮ್ಮಗೊಲಿದು
ಬತ್ತಲಿಂದ ಬಂದವಳ ನೋಡಿ ಎಲ್ಲರು
ಮತ್ತೆ ದೇವಿನುಡುಗೆಯುಟ್ಟು ಮುಕ್ತಿ ತಾವು ಪಡೆವೆವೆಂಬ
ತೊತ್ತು ಮಾಯಕಾರಿಯವಳಿಗೆ ಛಿಥೂ ಎಂಬರು

ಗಾಳಗೂಳರೆಲ್ಲ ಸೇರಿಕೊಂಡು ಕೈಯಲ್ಲಿದ್ದ ಹಣವನ್ನೆಲ್ಲಾ ಹಾಳುಮಾಡಿ ದೇವರ ಹೆಸರಲ್ಲಿ ಗಡಿಗೆ ಗಡಿಗೆ ಕಳ್ಳು ಕುಡಿದು ರಾತ್ರಿ ಬೆಳಗಾಗುವ ತನಕ ಮಜಾಮಾಡುತ್ತಿದ್ದರು. ಬಾಳುವ ಕುರಿಕೋಣಗಳನ್ನು ಕೊರಳಕೊಯ್ದು ತಮ್ಮ ದೇವತೆಗೆ ಒಪ್ಪಿಸುತ್ತಿದ್ದರು. ಹೀಗೆ ಪ್ರಾಣಿವಧೆ ಮಾಡಿ ನರಕಕ್ಕೆ ಬೀಳಬೇಡಿ ಎಂದು ಕೂಗಿ ಕನಕದಾಸರು ಜನರಿಗೆ ಹೇಳಿದರು. ಎಲ್ಲಮ್ಮನಂತಹ ಹೀನದೇವತೆಯ ಹೆಸರಲ್ಲಿ ನಡೆಯುತ್ತಿದ್ದ ಪ್ರಾಣಿವಧೆ ಮದ್ಯಪಾನವಲ್ಲದೆ ಬಸವಿ ಅಥವಾ ದೇವದಾಸಿ ಪದ್ಧತಿಯನ್ನು ಕಂಡು ಹೇಸಿ ರೇಗಿದರು. ದೇವರಹೆಸರಲ್ಲಿ ಬತ್ತಲೆ ಕುಣಿಯುವುದನ್ನು ನೋಡಿ ಅಸಂಸ್ಕೃತ ಹೀನಜನರು ತಾವು ಮುಕ್ತಿ ಪಡೆದೆವೆಂದು ಭಾವಿಸುತ್ತಾರೆ. ಅವಳನ್ನೇ ತಮ್ಮ ಕಾಮತೃಷೆಗೆ ಬಳಸುತ್ತಾರೆ. ಸಮಾಜದಲ್ಲಿ ಅವಳಿಗೆ ಛೀ ಕಾರ ಹಾಕುತ್ತಾರೆ. ಇದೆಂತಹ ಹೀನ ತುಚ್ಛ ಭಕ್ತಿಯೆಂದು ಕನಕರು ಸಿಡಿದೇಳುತ್ತಾರೆ. ಅದನ್ನು ನಿಂದಿಸುತ್ತಾರೆ. ಇಂದಿಗೂ ಈ ಬಸವಿ ಪದ್ಧತಿ ಉಳಿದುಕೊಂಡು ಬಂದಿರುವುದಲ್ಲದೆ ಇದನ್ನು ಹೋಗಲಾಡಿಸಲು ಸರಕಾರ ಕಾನೂನನ್ನೇ ಮಾಡಬೇಕಾದ ಪರಿಸ್ಥಿತಿಯನ್ನು ನೋಡಿದರೆ ಏನನ್ನಬೇಕು? ಈ ದಿಸೆಯಲ್ಲಿ ಅವರ ಕಾಲಕ್ಕಿಂತ ಹೆಚ್ಚೇನೂ ಸುಧಾರಣೆಯಾದಂತೆ ತೋರುವುದಿಲ್ಲ. ಕನಕದಾಸರ ವೈಶಿಷ್ಟ್ಯ ಈ ನಿಷ್ಠುರ ಸಾಮಾಜಿಕ ಪ್ರಜ್ಞೆ ಎನ್ನಬಹುದು.

## ಕನಕ ದಾಸರ ಕೀರ್ತನೆಗಳಲ್ಲಿ ಸಾಹಿತ್ಯಿಕ ಮೌಲ್ಯ

ಕೀರ್ತನೆಗಳು ಸಾಹಿತ್ಯ ಪ್ರಕಾರವಾದ ಮೇಲೆ ಅದರ ಮೌಲ್ಯವಿದ್ದೇ ಇದೆ. ಅನುಭವದ ರಸಾತ್ಮಕ ಅಭಿವ್ಯಕ್ತಿಗಳಾದ ಕೀರ್ತನೆಗಳು ಕಾವ್ಯಗುಣಪೂರ್ಣವಾಗಿವೆ. ತಮ್ಮ ಭಾವನೆಯನ್ನು ಸಮರ್ಥವಾಗಿ ಅಭಿವ್ಯಂಜಿಸಲು ಬೇಕಾದ ಭಾಷೆ, ಪದಮೈತ್ರಿ, ಅಲಂಕಾರ, ಆಡುನುಡಿ, ಗಾದೆಯ ಮಾತುಗಳನ್ನು ಅವರು ಬಳಸಿದ್ದಾರೆ. ಸಾಮಾನ್ಯರಿಗೂ ಅರ್ಥವಾಗುವುದೇ ಅವರ ಉದ್ದೇಶವಾದ್ದರಿಂದ ಅಂಥವರಿಗೂ ಪರಿಚಯವಿರುವ ಪ್ರಾಣಿ, ಪಶು, ಪಕ್ಷಿಗಳ ಉದಾಹರಣೆಗಳನ್ನು ಹೇರಳವಾಗಿ ಬಳಸಿದ್ದಾರೆ. ಕೆಲವು ಸಿದ್ಧ ಹೋಲಿಕೆ ಸಂಕೇತ ಪ್ರತಿಮೆಗಳು ಹೇರಳವಾಗಿವೆ. ಸಂಸಾರ ಸಾಗರ, ನೀರಮೇಲಣ ಗುಳ್ಳೆ, ಗೇರು ಹಣ್ಣಿನ ಬೀಜ, ಗಿಳಿ ಮತ್ತು ಬೆಕ್ಕು, ಜಾಲಿಯ ಮಠ ಇತ್ಯಾದಿ. ವಚನಗಳಲ್ಲಿ ಬೇರೆ ಬೇರೆ ಕಸಬಿನವರು ತಮ್ಮ ತಮ್ಮ ಕಸಬಿಗೆ ಸಂಬಂಧಿಸಿದ ಉದಾಹರಣೆ ಸಾಮಿತಿಗಳನ್ನು ಎತ್ತಿ

ಕೊಂಡು ಹೇಳಿದ್ದಾರೆ. ಹರಿದಾಸರಲ್ಲಿ ಇಂತಹ ವೃತ್ತಿ ನಿರತರು ಇಲ್ಲದ್ದರಿಂದ ಆ ರೀತಿಯ ದೃಷ್ಟಾಂತ ಪ್ರಯೋಗಗಳಿಲ್ಲ.

ಕನಕದಾಸರು ಪುರಂದರ ದಾಸ, ಕುಮಾರವ್ಯಾಸ ಮೊದಲಾದವರಿಂದ ಸಾಕಷ್ಟು ಪ್ರಭಾವಿತರಾಗಿದ್ದಾರೆ. ಪುರಂದರರ ಪ್ರಭಾವವಂತೂ ದಟ್ಟವಾಗಿ ಎದ್ದು ತೋರುತ್ತದೆ. ಪುರಂದರರಂತೆ ಸಾಮಾನ್ಯ ಜನರನ್ನು ದೃಷ್ಟಿಯಲ್ಲಿಟ್ಟುಕೊಂಡು ಗ್ರಾಮ್ಯ ಭಾಷೆಯನ್ನು ಬಳಸಿದ್ದುಂಟು. ಹರಿದಾಸರ ಹಾಡುಗಳ ಭಾಷೆ ಆಡುಮಾತಿಗೆ ಹತ್ತಿರ, ಇವರಲ್ಲಿ ಸಾಮಾಜಿಕ ಎಚ್ಚರ ಬಹಳ. ಖಂಡನ ಮಂಡನಗಳಲ್ಲಿ ಕನಕರ ಭಾಷೆ ಬಹಳ ಹರಿತ. "ಪುರಂದರ ದಾಸರಿಗಿಂತಲೂ ಹೆಚ್ಚು ಸ್ವತಂತ್ರವಾದ ವಿಮರ್ಶನ ಧೈರ್ಯ ಕನಕದಾಸರದ್ದು" ಎಂಬ ಮುಗುಳಿಯವರ ಮಾತನ್ನು ಒಪ್ಪಲೇ ಬೇಕು. ಅದೇ ರೀತಿಯಲ್ಲಿ "ಹಾಗೆ ನೋಡಿದರೆ ಪುರಂದರ ದಾಸರ ಕೀರ್ತನೆಗಳಿಗಿಂತ ಕನಕದಾಸರ ಕೀರ್ತನೆಗಳಲ್ಲಿ ಕಾವ್ಯಗುಣ ಒಂದು ಕೈಮಿಗಿಲಾಗಿಯೇ ಇರುವಂತೆ ತೋರುತ್ತದೆ." ಎಂಬ ಜಿ.ಎಸ್. ಶಿವರುದ್ರಪ್ಪನವರ ಮಾತಿನಲ್ಲೂ ಸತ್ಯಾಂಶವಿದೆ.

ಕನಕದಾಸರು ತಮ್ಮ ಸರಳ ಭಾಷೆಗೆ ಅನುಗುಣವಾಗಿ ತೀರ ಸಾಮಾನ್ಯವಾದ ಉಪಮೆ, ರೂಪಕ, ದೃಷ್ಟಾಂತ, ನಿದರ್ಶನ ಅರ್ಥಾಲಂಕಾರಗಳನ್ನು ಪ್ರಾಸ, ಅನುಪ್ರಾಸ, ಯಮಕ ಶಬ್ದಾಲಂಕಾರಗಳನ್ನು ರೋಚಕವಾಗಿ ಬಳಸಿದ್ದಾರೆ. ಅವರ ಕೆಲವು ಪದಪುಂಜಗಳು ಜನರ ಬಾಯಲ್ಲಿ ಇಂದಿಗೂ ಗಾದೆ ಮಾತಾಗಿ ಉಳಿದುಕೊಂಡಿವೆ. ಉದಾ:- "ಎಲ್ಲರೂ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ" ಅವರ ಶಬ್ದಚಿತ್ರ, ಪದಲಾಲಿತ್ಯ, ಸಂಗೀತ ಗುಣ ಕಾವ್ಯಶಕ್ತಿಯನ್ನು ಹೆಚ್ಚಿಸಿವೆ. ಅವರ ರೂಪಕ ನಿರ್ಮಾಣ ಶಕ್ತಿ ಕುಮಾರವ್ಯಾಸನಂತೆ ಅದ್ಭುತವಾದುದು. ಕೆಲವೊಮ್ಮೆ ಇಡೀ ಕೀರ್ತನೆಯೇ ರೂಪಕ ವಿಸ್ತಾರವನ್ನು ಪಡೆದು ಒಂದು ಹೊಸ ದೃಶ್ಯವನ್ನು ನಮ್ಮೆದುರು ಕಡೆದು ನಿಲ್ಲಿಸುತ್ತದೆ. ಇದರಿಂದ ಕೇಳುವವನಲ್ಲಿ ಓದುವವನಲ್ಲಿ ಆಗುವ ಪರಿಣಾಮ ಚಿರ, ತೀವ್ರ. ಅವರು ತಮ್ಮ ಕೃಷ್ಣ ಭಕ್ತಿಗೆ ಅನುಗುಣವಾಗಿ ರಾಮಾಯಣ ಮಹಾಭಾರತ ಪುರಾಣಗಳ ಕತೆ, ವ್ಯಕ್ತಿಗಳನ್ನು ಎತ್ತಿಕೊಂಡೇ ತಮ್ಮ ಪ್ರತಿಪಾದನೆ ಮಾಡುತ್ತಾರೆ. ಈ ದೃಷ್ಟಿಯಿಂದ ಆ ಕತೆಗಳೆಲ್ಲ ಹೊಸ ಪರಿಸರದಲ್ಲಿ ಮತ್ತೊಮ್ಮೆ ಹುಟ್ಟು ಪಡೆದಂತಾಗಿದೆ ಅಥವಾ ಅವುಗಳಿಗೆ ವ್ಯಾಖ್ಯಾನ ಬರೆದಂತಾಗಿದೆಯೆನ್ನಬಹುದು.

ಕೆಲವು ಉದಾಹರಣೆಗಳು --- ಉಪಮೆ ರೂಪಕಗಳು ಅವರ ಮೆಚ್ಚಿನ ಅಲಂಕಾರ ಳು.

ಗುಂಡು ಮುಣುಗಿದ ಹಕ್ಕಿಯಂತೆ ಕಂಡಕಂಡ ನೀರ ಮುಳುಗಿ
ಡುಂಡುಕನಂದದಿ ಕೆರೆಯ ದಂಡೆಯಲ್ಲಿ ಕುಳಿತುಕೊಂಡು
ಗಾಣದೆತ್ತಿನಂತೆ ಪ್ರದಕ್ಷಿಣೆಯ ಮಾಡಿ

ದೀಪದ ಬೆಳಕಿಗೆ ಕಾತರಿಸಿ ಬೀಳ್ವ ಪತಂಗದಂದದಲ್ಲಿ
ಸಂಪಿಗೆಯ ಪರಿಮಳವುಂಡ ಮಧುಪದಂತೆ
ಗಾಳದ ತುದಿಯ ಭೂನಾಗನ ಸವಿವ ಮೀನಿನಂತೆ

ದಾನ ಮಾಡದೆ ಇರಲು ಅಡವಿಯೊಳು ಕೆರೆ ತುಂಬಿಬತ್ತಿದಂತೆ

ತಲೆ ಹುಳಿತ ನಾಯಂತೆ ಹಲವು ಬೀದಿಯ ತಿರುಗಿ

ನಾಯ ಬಾಯ ಅರಿವೆಯಂತೆ ನಾನಾಕೋಟಲೆಯಲ್ಲಿ ಬಿದ್ದು

ಕೋಡಗ ಕೊರವನಿಗೆ ಸಿಲ್ಕಿ ಆಡಿದತೆರನಾಡಿದೆವೆ

ಕಿಟ್ಟಗಟ್ಟಿದ ಗಟ್ಟಿ ಕಬ್ಬಿಣದಂತೆ

ಸೋರೆಯೊಳು ಸುರೆ ತುಂಬಿ ಮೇಲೆ ಹೂವಿನ ಹಾರ ಹಾಕಿ
ಗೀರು ಗಂಧ ಅಕ್ಷತೆಯ ಧರಿಸಿದಂತೆ

ಎಂಬಂತಹ ನೂರಾರು ಉಪಮೆಯ ಸಾಲುಗಳನ್ನು ಉದಾಹರಿಸಬಹುದು. "ಸಂಪಿಗೆ -- ಮಧುಪ" ದಂಥವು ಕೆಲವು ಕವಿಸಮಯದಿಂದ ಬಂದುವಾದರೂ ನಾಯ ಬಾಯ ಅರಿವೆ, ಕೊರವನ ಕೋಡಗ, ಗಾಣದೆತ್ತು ಮೊದಲಾದವು ಸಮಾಜದಲ್ಲಿ ನಿತ್ಯ ಕಾಣುವಂಥವು. ಸಾಮಾನ್ಯರಿಗೆ ಸುಲಭಗ್ರಾಹ್ಯವಾದಂಥವು.

ರೂಪಕಗಳು :-- ಕನಕರ ರೂಪಕಗಳು ಅಗಾಧ ಶಕ್ತಿಯಿಂದ ಕೂಡಿ ಮುಳ್ಳಿನ ಮೊನೆಯಂತೆ ಇರಿಯುತ್ತವೆ. ಇಡೀ ಶಬ್ದ ಚಿತ್ರ ಕಣ್ಣೆದುರು ಕಟ್ಟುತ್ತದೆ. ನರನೆಂಬ ಕುರಿ, ಯಮನೆಂಬ ತೋಳ, ಕುರಿ ಕಾಯುವವ ನಮ್ಮಜ್ಜ, ಅಷ್ಟಮದಗಳು ಟಗರುಗಳು, ಸಿದ್ಧ ಸಾಧ್ಯರು ತೋಳುಗಳು ಎಂಬ ಈ ಪರಂಪರಿತ ರೂಪಕದ ವಿಸ್ತಾರ ಕುರಿಯಂತೆ ಮಾನವನ ಮೌಢ್ಯ ಅದರಿಂದ ಅವನ ಅಳಿವನ್ನು ಸಮರ್ಥವಾಗಿ ನಿರೂಪಿಸುತ್ತದೆ.

ದೇವರಿಲ್ಲದ ಗುಡಿಯು ಹಾಳು ಬಿದ್ದಂಗಡಿಯು
ಧರ್ಮವಿಲ್ಲದ ಅರಸು ಮುರಿದ ಕಾಲಿನ ಹೊರಸು,
ಕಂಡು ಕರೆಯದ ನಂಟ ಮೊನೆಯು ಕೆಟ್ಟಿಹ ಕಂಟ
ಉಂಡು ನಗದಿಹ ಮೋರೆ ಕಹಿಯ ಸೋರೆ

ಕಂಡರೆ ಸೇರದ ನಾರಿ ಕೆಂಡವನುಗಳುವಮಾರಿ
ದಂಡವ ತೆರಿಸುವ ಪುತ್ರ ಹಗೆಗಳಿಗವ ಮಿತ್ರ

ಪರನಾರಿಯರೊಡನಾಟ ಗರಳವನಟ್ಟುಂಬಾಟ
ಬರೆದೂ ಅರಿಯದ ಲೆಕ್ಕ ಕಡೆಯಲಿ ಬಹುದುಃಖ
ದೇಹ ನಾನಾಜನ್ಮದಿ ಬಂದ ನಾಟಕದ ಬೊಂಬೆ
ಅರಿವೆಂಬ ದೀಪ ಹಿಡಿದು

ಎಂಬಂತಹ ಸಾಲುಗಳಲ್ಲಿ ಮಧ್ಯಾಂತ್ಯ ಪ್ರಾಸವೂ ಸೇರಿ ಗಾದೆಯ ಮಾತಿನಂತೆ ರೂಪಕ ಶಕ್ತಿ ಗಾಢವಾಗಿದೆ. "ಬೊಂಬೆಯಾಡಿಸಿದ ಮಹಾಭಾರತವ" ಎಂಬ ಮಾತು ಪರಮಾತ್ಮಎಂತಹ ದೊಡ್ಡ ಸೂತ್ರಧಾರಿ ಎಂಬುದನ್ನು ತಿಳಿಸುತ್ತದೆ.

"ಉದಯಾಸ್ತಮಾನವೆಂಬ ಎರಡು ಕೊಳಗವ ಮಾಡಿ ಆಯುಷ್ಯದ ರಾಸಿಯನ್ನು ಅಳೆಯಿರಯ್ಯ" ಎಂಬಲ್ಲಿ ಆಯುಷ್ಯದ ಅಳತೆಗೋಲನ್ನು ತೋರಿ ಅದೆಷ್ಟು ಬೇಗ ಸೋರಿ ಹೋಗುತ್ತದೆಂದು ಜ್ಞಾಪಿಸುತ್ತಾರೆ. ಬಂದೆವಯ್ಯಾ ಗೋವಿಂದ ಶೆಟ್ಟಿ ಎಂಬ ಹಾಡಿನಲ್ಲಿ ತಿರುಪತಿಯ ದೇವರನ್ನು ತಿಮ್ಮಶೆಟ್ಟಿ ಗೋವಿಂದ ಶೆಟ್ಟಿ ಎಂದು ರೂಪಿಸಿ ಆಡುವ ಕಟಕಿ, ವ್ಯಂಗ್ಯ ಮಾತಿನ ಶಕ್ತಿ ಅಗಾಧ. ಹಣಕೊಟ್ಟು ಸೇವೆ ಮಾಡಿ ಪುಣ್ಯ ಪಡೆದೆವು ಪಾಪ ಕಳ ಕೊಂಡೆವು ಎಂದು ಭಾವಿಸುವ ಜನ ದೇವರನ್ನು ತಮ್ಮಷ್ಟೇ ಕೀಳಾಗಿ ಭಾವಿಸುತ್ತಾರಲ್ಲ ಈ ಮೂಢರು, ದೇವರು ಹಣಕ್ಕೆ ಒಲಿಯುವನೇ? ಎಂಬ ವ್ಯಂಗ್ಯ ಈ ರೂಪಕದಲ್ಲಿ ಗಾಢವಾಗಿದೆ.

ಹೇಗಿದ್ದು ಹೇಗಾದೆಯೋ ಎಂಬ ಹಾಡಿನಲ್ಲಿ ಆತ್ಮವು ಬಸಿರೆಂಬ ಹಳ್ಳಿಗೆ ಬಂದು ಮಾಸೆಂಬ ಊರಲ್ಲಿ ನಿಂದು ನೆಲವೆಂಬ ಬಟ್ಟೆ ಹಿಡಿದು ಕಿಸುಕು ಅರಿವೆ ಹೊದ್ದು ಮತ್ತೆ ಯೌವನವೆಂಬ ಊರಿಗೆ ಬಂದು ಅಳಲೆಂಬ ಮಕ್ಕಳನ್ನು ಬೆಳೆಸಿ ದಾರಿದ್ರದ ಪೇಟೆಗೆ ಬಂದು ಮತ್ತೆ ಹಳೆಯ ಬೀಡು ಅಂದರೆ ಬಂದಲ್ಲಿಗೇ ಹಿಂತಿರುಗುವುದು. ಯೋಗೀಶನ ಆನಂದ ಪುರದಲ್ಲಿರುವುದು ಬಿಟ್ಟು ಏಕೆ ಹೀಗೆ ವ್ಯರ್ಥ ತಿರುಗಾಡುತ್ತಿ ಎಂದು ಕೇಳುತ್ತಾರೆ. ಆತ್ಮದ ಬವಣೆಯನ್ನು ನಿರೂಪಿಸುವ ಈ ಪರಂಪರಿತ ರೂಪಕದಲ್ಲಿ ಜೀವಿಯ ಅವಸ್ಥೆ ಕಷ್ಟಗಳು ಸಮರ್ಥವಾಗಿ ಪ್ರತಿಪಾದಿತವಾಗಿವೆ.

"ಚೆನ್ನ ಬಾಲಕೃಷ್ಣನೆಂಬ ಬಾಳೆಹಣ್ಣು, ಮಾಧವನೆಂಬ ಮಾವಿನ ಹಣ್ಣು"

ಪರಮಾತ್ಮನ ನಾಮೋಚ್ಚಾರಣೆಯ ಸವಿಯನ್ನು ತೋರಿಸುವ ರೂಪಕಗಳು.

ದೃಷ್ಟಾಂತ :- ಪುರಾಣದ ಕತೆಗಳು ವ್ಯಕ್ತಿಗಳ, ಸನ್ನಿವೇಶಗಳ ನಿದರ್ಶನಗಳೇ ಮೇಲಿಂದ ಮೇಲೆ ಭಕ್ತಿ ಬೋಧಕವಾಗಿ ಬರುತ್ತವೆ. ಕೆಲವೊಮ್ಮೆ ತೀರ ಸಹಜವಾದ ವುಗಳಿವೆ - ಬೆಟ್ಟದಾ ತುದಿಯಲ್ಲಿ ಹುಟ್ಟಿದ ವೃಕ್ಷ, ಕಲ್ಲೊಳಗ ಹುಟ್ಟಿ ಕೂಗುವ ಕಪ್ಪೆಗಳು ಯಾರಿಗೂ ತಿಳಿಯ ಬಹುದಾದವು. ಕಳವಿನ ಒಡವೆಯಲ್ಲಿ ಒಡಯನಿಗೆ ಪಾಲೀವ

ಕಳ್ಳಬಂಟ, ಕನ್ನವನ್ನು ಕೊರೆಯುತ್ತಿರುವಾಗ ಕಳವು ಮಾಡಿದನೆಂದು ಹಿಡಿದೆಳತಂದರೆ ತಳವಾರನೇನ ಮಾಡುವನೊ ಎಂಬಲ್ಲಿ ಕಳ್ಳತನದಲ್ಲಿ, ಲಂಚದಲ್ಲಿ ಪಾಲುಗಾರಿಕೆ ಹೇಗೆ ನಡೆಯುತ್ತದೆ, ಆ ತಪ್ಪಿನಿಂದ ಕಳ್ಳ ಹೇಗೆ ಪಾರಾಗುತ್ತಾನೆ ಎಂಬ ಲೌಕಿಕ ದೃಷ್ಟಾಂತ ಅವರು ಕೇಳಿ ನೋಡಿದುದನ್ನು ಚಮತ್ಕಾರವಾಗಿ ಬಳಸಿದ್ದಾರೆ.

ಅತಿಶಯೋಕ್ತಿ, ಅತ್ಯುಕ್ತಿ :-- ಹಲವು ಜನ್ಮದ ತಾಯ ಮೊಲೆಹಾಲು ಕುಡಿಯುವಾಗ ಬಿದ್ದ ಹನಿ ಕೂಡಿ ಕ್ಷೀರಾಂಬುಧಿಗೆ ಎರಡು ಪಾಲಿಗೂ ಹೆಚ್ಚು, ಸುರಿಸಿದ ಕಣ್ಣೀರು ಲವಣಾರ್ಣವಕೆ ಮೂರು ಮಡಿ, ಎಲುಬು ನರಗಳು ಕೂಡಿ ರಾಶಿಹಾಕಿದರೆ ಮೇರುಪರ್ವತಕ್ಕೆ ನಾಲ್ಕು ಮಡಿ, ಸುಲಿದು ಚರ್ಮವ ಹಾಸಿದರೆ ಭೂಮಿಗೆ ಐದು ಪಾಲು ವಿಸ್ತಾರವಾಗುವುದು ಎಂಬಂತಹ ಅತಿಶಯೋಕ್ತಿ ಒಂದು ಜೀವಿ ಎಷ್ಟೆಷ್ಟೋ ಜನ್ಮಗಳನ್ನು ತಾಳಿ ಹೇಳಲಾರದ ಹೇಳಬಾರದ ಕಷ್ಟಗಳನ್ನನುಭವಿಸುತ್ತದೆ. ಆದ್ದರಿಂದ ಇದರಿಂದ ಬಿಡುಗಡೆ ಪಡೆಯ ಬೇಕೆಂಬ ಭಾವನೆ ಮೂಡಿಸುವಲ್ಲಿ ಸಂಸಾರದೆಡೆಗೆ ವೈರಾಗ್ಯ ತರುವಲ್ಲಿ ಸಮರ್ಥವಾಗುತ್ತವೆ. ಇಡೀ ಈ ಹಾಡು ದೇಹದ ಕೊಳಕು ಹೇಸಿಗೆ ರೋಗಾದಿಗಳನ್ನು ವರ್ಣಿಸಿ ಅದರೆಡೆಗೆ ಜುಗುಪ್ಸೆ ಹುಟ್ಟಿಸುತ್ತದೆ. ಇಂತಹ ವರ್ಣನೆಗಳು ರನ್ನನ ಅಜಿತ ತೀರ್ಥಂಕರ ಪುರಾಣದ ವೈರಾಗ್ಯ ವರ್ಣನೆಯನ್ನು ನೆನಪಿಸುತ್ತವೆ.

ಶಬ್ದಾಲಂಕಾರಗಳು :-- ಕನಕರ ಪದ ಮೈತ್ರಿ ಲಯ ವಿನ್ಯಾಸದೊಂದಿಗೆ ನಾನಾ ರೀತಿಯ ಶಬ್ದಾಲಂಕಾರಗಳು ಅವರ ಹಾಡುಗಳ ಇಂಪನ್ನು ಹೆಚ್ಚಿಸಿವೆ. ಸಹಜವಾಗಿ ಮೂಡಿರುವ ಈ ಭೂಷಣ, ಕಿಂಕಿಣಿಗಳ ನಾದ ರಮ್ಯತೆ ಸೊಗಸುತ್ತದೆ. ಆದ್ಯಂತ್ಯ ಪ್ರಾಸಗಳಲ್ಲದೆ ಮಧ್ಯಪ್ರಾಸವನ್ನು ಅನಾಯಾಸವಾಗಿ ಅವರು ಜೋಡಿಸಬಲ್ಲರು.

ಕಂಡು ಕರೆಯದ ನಂಟ ಮೊನೆಯು ಕೆಟ್ಟಿಹ ಕಂಟ
ಉಂಡು ನಗದಿಹ ಮೋರೆ ಕಹಿಯ ಸೋರೆ
ಎಂಬಂತಹ ಸಾಲುಗಳಲ್ಲಿ ಆದ್ಯಂತ್ಯ ಮಧ್ಯಪ್ರಾಸಗಳು ಲಾಸ್ಯವಾಡಿವೆ.

"ಕಂಡೆ ನಾ ತಂಡ ತಂಡದ ಹಿಂಡು ದೈವ ಪ್ರಚಂಡ ರಿಪು
ಗಂಡ ಉದ್ದಂಡ ನರಸಿಂಹ"
ಇಲ್ಲಿ ಪ್ರಚಂಡ ಅನುಪ್ರಾಸದ ತಾಂಡವವಿದೆ.

ಹರಿಗೆ ಮಾವನು ಆದ ಹರಿಗಳಿಯ ತಾನಾದ
ಹರಿಯು ತನ್ನೊಳಗೆ ತಾ ಹರಿಯೊಳಗೆ ಇಪ್ಪ
ಹರಿಯ ರೂಪವ ತಾಳಿ ಇರುಳು ದೈತ್ಯನ ಕೊಂದ

ಎಂಬಲ್ಲಿ 'ಹರಿ' ಶಬ್ದದ ಶ್ಲೇಷ ಮೂಲಕವಾದ ಯಮಕ ಒಗಟಿನಂತೆ ಅಚ್ಚರಿ ಯನ್ನುಂಟುಮಾಡುತ್ತದೆ. ಕನಕರು 'ಆನೆ' ಬಂತೆಂದರೆ ಇದಾವ ಆನೆ ಎಂದು ಕಣ್ಣು ಹೊರಳಿಸಬೇಡಿ ಅವರಿಗೆ ಆನೆ, ಹಕ್ಕಿ ಹಣ್ಣು ಎಲ್ಲಾ ಪರಮಾತ್ಮನಾದ ಶ್ರೀ ಕೃಷ್ಣನೆ -- ಅದಾವ ಆನೆ ಅನ್ನತ್ತೀರಾ?--

ಗಂಡುಗಲಿ ಮಾಗಧನ ಒರಸಿದಾನೆ
ಬಾಲಕನ ನುಡಿಕೇಳಿ ಖಳನ ಸೀಳಿದಾನೆ
ಪಾಲುಂಡು ವಿದುರನ ಸಲಹಿದಾನೆ
ಲೋಲಾಕ್ಷಿಯ ಮಾನಭಂಗಕ್ಕೊದಗಿದಾನೆ
ಖೂಳ ಶಿಶುಪಾಲನ ಸೀಳಿದಾನೆ
ಭಜಕರ ವಶವಾನೆ"

ಇದೆಂತಹ ವಿಚಿತ್ರ ಆನೆಯೋ.

ರಸಭಾವಗಳು :-- ಶಮೆಯ ಸ್ಥಾಯಿಯಲ್ಲಿ ನೆಲೆಗೊಂಡ ಶಾಂತ, ಭಕ್ತಿಯೇ ಕೀರ್ತನೆಗಳ ಮುಖ್ಯರಸ. ಪ್ರತಿಯೊಂದು ಕೀರ್ತನೆಯೂ ಭಾವ ಪ್ರಖರತೆಯಿಂದ ಪುಟಿದೇಳುವ ನಿರ್ಭರ ಭಾವಗೀತ. ಇತರ ರಸ ಭಾವಗಳಿಗೆ ಇಲ್ಲಿ ಅವಕಾಶ ಕಡಿಮೆಯಾದರೂ ಪೌರಾಣಿಕ ಪ್ರಸಂಗಗಳನ್ನು ಉಲ್ಲೇಖಿಸುವಲ್ಲಿ ಶೃಂಗಾರ, ಹಾಸ್ಯ ಮೊದಲಾದವೂ ಪ್ರಸಂಗವರಿತು ಚಿಮ್ಮಿವೆ. ಶ್ರೀ ಕೃಷ್ಣನ ಬಾಲಲೀಲೆ ಮಹಿಮೆಗಳನ್ನು ಕೊಂಡಾಡುವಲ್ಲಿ ವಾತ್ಸಲ್ಯ ಅದ್ಭುತವಲ್ಲದೆ ಶೃಂಗಾರವೂ ಕಾಣಿಸಿಕೊಂಡಿದೆ. ಗೋಪಿಯರು ಸ್ನಾನ ಮಾಡಲು ನೀರಿಗಿಳಿದಾಗ ಅವರ ಬಟ್ಟೆಯನ್ನು ಅಪಹರಿಸಿ ವಿಲಾಸ ತೋರಿದ ಪ್ರಸಂಗ - ಹಿಂದೆ ಮುಂದೆ ಕೈಮುಚ್ಚಿ ತಲೆ ಬಾಗಿ ವಂದಿಸಿದರೆ ಸೀರೆ ಕೊಡುತ್ತೇನೆ, ಎಂದ. ಆಗ ಅವರು ಒಂದು ಕೈಮುಗಿಯುತ್ತೇವೆ ಎಂದರೆ ಇವನು ಎರಡೂ ಕೈ ಮುಗಿಯಬೇಕು ಎಂದು ಹಟ ಹಿಡಿದಾಗ ಹೇಗಾದರೂ ಸೀರೆ ಸಿಕ್ಕಿದರೆ ಸಾಕೆಂದು ಅವರು ಎರಡೂ ಕೈಮುಗಿದರಂತೆ ಇಷ್ಟೂ ಅಲ್ಲದೆ ಅವರನ್ನು ನಗ್ನರಾಗಿ ಮಾಡಿ ಚಪ್ಪಾಳೆ ಹಾಕುತ್ತಾ ಪ್ರದಕ್ಷಿಣೆ ಬರೆಸಿ, ಥೀ ಥೀ ಯೆಂದು ತಾನು ಕೂಗುತ್ತಾ ಅವರಿಂದ ಘಗಡಿ ಹಾಕಿಸಿದ, ಸಾಲಾಗಿ ನಿಂತು ಒಬ್ಬೊಬ್ಬರಾಗಿ ಬಂದರೆ ಸೀರೆ ಕೊಡುತ್ತೇನೆ ಎಂದ ಹೀಗೆ ಕೊರವ ಕೋಡಗನನ್ನು ಆಡಿಸುವಂತೆ ನಾನಾ ರೀತಿಯಲ್ಲಿ ಆಡಿಸಿ ಕೊನೆಗೆ ಸೀರೆಗಳನ್ನು ಕೊಟ್ಟನಂತೆ. ಕೃಷ್ಣನ ಬಾಲಲೀಲೆಯಲ್ಲಿ ಹಾಸ್ಯಕ್ಕೂ ಅವಕಾಶ ಬಂದಿದೆ - ಗೋಪಿಯೊಬ್ಬಳ ಗಂಡ ಜುಟ್ಟು ಬಿಚ್ಚಿ ಹಾಕಿ ಮಂಚದಲ್ಲಿ ಮೈಮರೆತು ಒರಗಿದ್ದನಂತೆ. ತುಂಟ ಕೃಷ್ಣ ಸದ್ದಾಗದಂತೆ ಬಂದು ಜುಟ್ಟಿನ ತುದಿಯನ್ನು ಮಂಚದ ಕಾಲಿಗೆ ಕಟ್ಟಿದ, ಕೊಟ್ಟಿಗೆಯ ಮಾಡಿಗೆ ಬೆಂಕಿ ಹಿಡಿದಿದೆ ಬೇಗ ಏಳೆಂದು ಯಾರೋ ಬೊಬ್ಬೆ ಹಾಕಿದಾಗ ಅವನು ಥಟ್ಟನೆ ಗಡಿಬಿಡಿಯಲ್ಲಿ ಎದ್ದಾಗ ಜುಟ್ಟು ಕಿತ್ತು ನೆಲಕ್ಕೆ ಬಿದ್ದನಂತೆ-

ಹೇಳುವೆ ಕೇಳೆ ಅಮ್ಮ - ಇವಳು ದೇ
ತಾಳನಂತಿರುತಿಹಳು
ಬಾಲಕನಾಗಿವಳುದ್ದಕೆ ನೆಗೆವನೆ
ಜೋಲುವ ತೊಗಲಿಗಾಗಿ

ಎಂಬ ಪದ್ಯದಲ್ಲಿ ಕುಳ್ಳನಾದ ಬಾಲಕ ಕೃಷ್ಣ ದೇತಾಳನಂತಿರುವ ಹೆಣ್ಣೊಬ್ಬಳ ಜೋಲು ತೊಗಲಿಗಾಗಿ ನೆಗೆಯುತ್ತಾನಂತೆ. ಹಸುಗೂಸು ಕೃಷ್ಣ ತೊಲೆಗೆ ನಿಚ್ಚಣಿಕೆ ಹಾಕದೆ ನೆಲುವಿನ ಹಾಲನ್ನು ಕುಡಿಯುವನು ಗೋಪಿಯೊಬ್ಬಳು ಮಂಚದಲ್ಲಿ ಮೈಮರೆತು ನಿದ್ರಿಸುತ್ತಿದ್ದಾಗ ಹರಿವ ಹಾವನೆ ತಂದು ಮಗ್ಗುಲಲ್ಲಿಟ್ಟು ಇರದೆ ಓಡಿಹೋದನಂತೆ ಗೋಪಿಯೊಬ್ಬಳು ನೀರಿಗೆ ಹೋಗಿದ್ದಾಗ ಮಲಗಿದ್ದ ಮಕ್ಕಳ ಬಾಯಿಗೆ ಬೆಣ್ಣೆಯನ್ನು ಮೆತ್ತಿ ಬೆಣ್ಣೆ ಅವರು ತಿಂದರೆಂದು ತನ್ನ ತಪ್ಪನ್ನು ಅವರ ಮೇಲೆ ಹೊರಿಸಿದ ಇಂತಹ ಹಾಸ್ಯ ಸನ್ನಿವೇಶ ಸೃಷ್ಟಿಯಲ್ಲಿ ಕನಕರ ರಸಿಕತೆ ಮಿಂಚಿದೆ.

ಭಾಷೆ, ಶೈಲಿ :-- ಸಂಸ್ಕೃತ ಕನ್ನಡಗಳ ಹದವರಿತ ಮಿಶ್ರಣವಿರುವ ಸರಳಸುಂದರ ಭಾಷೆ ಕನಕರದು. ಆದಷ್ಟು ಸರಳ ಕನ್ನಡದಲ್ಲಿ ಹೇಳಬೇಕೆಂಬುದೇ ಅವರ ಉದ್ದೇಶ. "ಸಾಮಾಜಿಕ ಎಚ್ಚರ" ದಿಂದ ಅವರು ಸರಳತೆಯನ್ನು ಬೆಳೆಸಿಕೊಂಡಿದ್ದಾರೆ. ಸಂಬಂಧ ವಾಚಕಗಳನ್ನೇ ನೇಯುತ್ತಾ ಹೋಗುವಲ್ಲಿ, ಮುಂಡಿಗೆಗಳಲ್ಲಿ ಅರ್ಥವಾಗದ ಒಗಟನ್ನು ಕೇಳಿದಂತೆ ತಲೆ ಕೆಡಿಸಿಕೊಂಡರೂ ಹೊಲಬುದೋರದ ಎಡೆಗಳಿವೆ. ಇಂಥವುಗಳು ಹೆಚ್ಚಿಲ್ಲದಿರುವುದರಿಂದ ಚಮತ್ಕಾರಕ್ಕಾಗಿ ಬುದ್ಧಿಗೆ, ಪುರಾಣ ಜ್ಞಾನಕ್ಕೆ ಸವಾಲು ಹಾಕಿ ತನ್ನ ಕುಶಲತೆಯನ್ನು ಮೆರೆಯುವ ಮನವಿದ್ದಂತೆ ತೋರುತ್ತದೆ. ಹಳಗನ್ನಡ ನಡುಗನ್ನಡಕ್ಕೆ ತಿರುಗಿ ಹೊಸಗನ್ನಡಕ್ಕೆದಾರಿಮಾಡಿಕೊಡುವ ಘಟ್ಟದ ಅವರ ಭಾಷೆಯಲ್ಲಿ ಈ ರೀತಿಯ ಲಕ್ಷಣಗಳು ಕಾಣುತ್ತವೆ. ನಡುಗನ್ನಡದಿಂದ ಹೊಸಗನ್ನಡಕ್ಕೇ ಹೆಚ್ಚು ಒತ್ತು ಕೊಡುತ್ತದೆ. ಪದಮೈತ್ರಿ ಲಯದಿಂದ ಕೂಡಿದೆ. ರಗಳೆ, ಷಟ್ಪದಿ, ಸಾಂಗತ್ಯಗಳ ಲಯವಿದೆ. ಕೆಲವೆಡೆ ಗ್ರಾಮ್ಯ ಪ್ರಯೋಗಗಳು ಬಂದು ನೈಜತೆಯನ್ನು ತಂದಿವೆ.

ಗುಂಗಾಡಿ ಸೋಮನ ಕೊಂದಾನ್ಮಾ
ಬಂಗಾರ ದೊಡಲನಿಗಿತ್ತಾನ್ಮಾ

ಎಂಬಂತಹ ಕಡೆಗಳಲ್ಲಿ ಗ್ರಾಮ್ಯ ಭಾಷೆಯ ಸೊಗಸನ್ನು ಕಾಣಬಹುದು. ಕೃತಕವಲ್ಲದ ಪ್ರಾಸ ಅನುಪ್ರಾಸ ಯಮಕ ಶಬ್ದಾಲಂಕಾರಗಳು ಸಾಮಾನ್ಯವಾದ ಉಪಮೆ, ರೂಪಕ, ದೃಷ್ಟಾಂತ ಅತಿಶಯೋಕ್ತಿ ಮೊದಲಾದ ಅಲಂಕಾರಗಳು ಬಳಕೆಯಾಗಿವೆ.

ಕೆಲವೊಮ್ಮೆ ಪಳಿದ್ಯ (ಸುವಾಸನೆಯ ವಸ್ತುಗಳನ್ನು ಹಾಕಿದ ಕುಡಿಯುವ ಬಿಸಿ ನೀರು) ಅಳಿ (ಮಜ್ಜಿಗೆ) ಎಂಬಂತಹ ಹಳೆಯ ಶಬ್ದಗಳು ಹಣೆ ಇಕ್ಕಿವೆ. ಇಂಥವು ಈಗ

ಗ್ರಾಂಥಿಕ ಕನ್ನಡದಲ್ಲಿ ಮರೆಯಾಗಿದ್ದರೂ ಅಂದು ರೂಢಿಯಲ್ಲಿದ್ದು ಇಂದು ಕೆಲವು ಉಪ ಭಾಷೆಗಳಲ್ಲಿ ರೂಢಿಯಲ್ಲಿವೆ. ಮೂವತ್ತಮೂರು ಎಂಬರ್ಥದ "ತ್ರೆತ್ತೀಸ" ಎಂಬಂತಹ ಅನ್ಯಭಾಷಾ ಶಬ್ದಗಳಿವೆ. ವ್ಯಾಕರಣಕ್ಕೆ ಹೊಂದದ ಕೆಲವು ಶಬ್ದರೂಪಗಳು ( ನಾರಾಯಣ + ಎನು) ನಾರಾಯಣೆನು, ಗಾಂಗೆಯ (ಗಾಂಗೇಯ), ಗಾರ್ಗೆಯ (ಗಾರ್ಗ್ಯ) ತ್ರಾಯಿ (ತ್ರಾಹಿ) ಕಾಣುತ್ತವೆ.

ಸಹಜವಾದ ಉದಾಹರಣೆಗಳು, ನುಡಿಗಟ್ಟುಗಳು, ಗಾದೆಮಾತುಗಳು ಪ್ರಯೋಗ ನೈಜತೆಯನ್ನು ತಂದಿವೆ. ಕೆರೆ ದಂಡೆಯ ಕೊಕ್ಕರೆ, ಕಲ್ಲೊಳಗಿನ ಕಪ್ಪೆ, ಕಾಲು ಮುರಿದ ಹೊರಸು, ನಾಯಬಾಯ ಅರಿವೆ, ಕೊಡದ ಜೇನಿನಲ್ಲಿ ಬಿದ್ದ ನೊಣ, ಕಟುಕರ ಕೈಯ ಮೇಕೆ, ಕೊರವನ ಕೋಡಗ ಇಂತಹವು ಸರಳ ಸಹಜ. ಪ್ರಾಸಬದ್ಧವಾಗಿ ಮಾರ್ಮಿಕವಾಗಿ ಹೇಳಿದ ಕೆಲವು ಅನುಭವ ವಾಕ್ಯಗಳು ಗಾದೆಯ ಮಾತಿನಂತಿವೆ-

ಮಕ್ಕಳಿಲ್ಲದ ತಾಯಿ ಕೊಳೆತ ತೆಂಗಿನಕಾಯಿ
ಸಮಯಕ್ಕೊದಗದ ಅರ್ಥ ಸಾವಿರವಿದ್ದರು ವ್ಯರ್ಥ
ಬಾಯಿನಾರಿದ ಮೇಲೆ ಏಕಾಂತವೆ?
ಸುಣ್ಣವಿಲ್ಲದ ವೀಳ್ಯವದು ಸ್ವಾದುವೆ?
ಬೆಲೆಬಿದ್ದ ಸರಕಿನೊಳು ಲಾಭವುಂಟೆ
ನೇಮವಿಲ್ಲದ ಹೋಮವೇತಕೆ
ಸತ್ವ ತಗ್ಗಿದ ಮೇಲೆ ಸಾಮರ್ಥ್ಯವೇ
ಮಾತು ಕೇಳದೆ ಮಲೆತು ನಡೆವ ಮಕ್ಕಳೇತಕೆ?
ಭೀತನಾಗಿ ಓಡಿ ಬರುವ ಬಂಟನೇತಕೆ?
ಮಾನಹೀನನಾಗಿ ಬಾಳ್ವ ಮನುಜನೇತಕೆ?
ಜ್ಞಾನವಿಲ್ಲದೆ ನೂರುಕಾಲ ಬದುಕಲೇತಕೆ
ಸನ್ನೆಯರಿತು ನಡೆಯದಂಥ ಸತಿಯಿದ್ದೇತಕೆ?
ಕಣ್ಣಿಲ್ಲದವಗೆ ಕನ್ನಡಿಯಿದ್ದು ಫಲವೇನು
ಅಲ್ಪದೊರೆಗಳ ಜೀತ ಎಷ್ಟು ಮಾಡಿದರೇನು

ಅಪಾರ ಲೋಕಾನುಭವವುಳ್ಳ ಇಂತಹ ನೂರಾರು ಸಾಲುಗಳು ಒಮ್ಮೆ ಕೇಳಿದರೆ ಮತ್ತೆ ಮರೆಯಲಾಗದಂಥವು. ಅದಕ್ಕಾಗಿಯೇ ಅವುಗಳ ಕಟ್ಟು ಹಾಗೆ ಬಂಧುರವಾಗಿದೆ. ಪಲ್ಲವಿಯ ಪುನರಾವರ್ತನೆ ಹೇಳುವ ವಿಚಾರವನ್ನು ಒತ್ತಿ ಹೇಳುತ್ತದೆ. ನಿನ್ನದೇನೆಲೊ, ನಿನ್ನದೇನೋ ಎಂದು ಪ್ರತಿಪಾದದ ಕೊನೆಯಲ್ಲಿ ಪುನರಾವರ್ತಿತವಾಗುವ ಪದಪುಂಜ ಕೇಳುಗನನ್ನು ಮತ್ತೆ ಮತ್ತೆ ಪ್ರಶ್ನಿಸಿ ಸಂದೇಹ ದೂರಮಾಡಿ ಅವರು ಹೇಳುವ ವಿಚಾರವನ್ನು ಹೃದಯದಲ್ಲಿ ನೆಲೆಗೊಳಿಸುತ್ತದೆ.

ಕನಕರ ಭಕ್ತಿಭರಿತ ಭಾವಗೀತೆಗಳು ಹಲವಾರು ಇಂದಿಗೂ ಜನರ ಬಾಯಲ್ಲಿ ಅಚ್ಚಳಿಯದೆ ನಲಿದಾಡುತ್ತವೆ. ಉದಾ :-- ನೀ ಮಾಯೆಯೊಳಗೋ ತನು ನಿನ್ನದು ಜೀವನ ನಿನ್ನದು, ತಲ್ಲಣಿಸದಿರು ಕಂಡ್ಯ ತಾಳು ಮನವೇ, ಕುಲ ಕುಲ ಕುಲವೆಂದು ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ ಕಪ್ಪುಪಟ್ಟರು ಇಲ್ಲ ಮೊದಲಾದವು.

ಸಂಗೀತವನ್ನು ಬಳಸಿಕೊಂಡುದರಿಂದ ದಾಸರ ಭಕ್ತಿ ಜ್ಞಾನ ವೈರಾಗ್ಯ ನೀತಿ ಬೋಧೆಗಳ ಉದ್ದೇಶ ವಚನಕಾರರಿಗಿಂತ ಹೆಚ್ಚಾಗಿ ಕೈಗೂಡಿದೆಯೆನ್ನಬಹುದು. ಈಗಲೂ ದಾಸರ ಹಾಡುಗಳು ಅಲ್ಪ ಸ್ವಲ್ಪವಾದರೂ ಜನರ ಬಾಯಲ್ಲಿ ಉಳಿದುಕೊಂಡುದರಿಂದ ಇದು ಸ್ಪಷ್ಟ. ಮಾತ್ರವಲ್ಲ, ಭಜನಾ ಮಂಡಳಿಗಳು, ಭಜನಾಮಂದಿರಗಳು ಈ ಕಾಲದಲ್ಲಿಯೂ ಅಲ್ಲಲ್ಲಿ ಹಳ್ಳಿ ಪಟ್ಟಣಗಳಲ್ಲೂ ತಲೆಯೆತ್ತುವುದನ್ನು ನೋಡಿದರೆ ಹರಿದಾಸರ ಪ್ರಭಾವ ಇನ್ನೂ ಮಾಸಿಲ್ಲ, ನವನಾಗರಿಕತೆಯ ಸುಂಟರಗಾಳಿಗೆ ಸಿಕ್ಕಿದರೂ ಅದರ ಬೇರು ಕದಲಿಲ್ಲವೆಂದು ತೋರುತ್ತದೆ. ಕೀರ್ತನೆಗಳೇನೋ ಜನರ ಬಾಯಲ್ಲಿ ಉಳಿದು ಕೊಂಡಿವೆ, ನೀತಿ, ಸಮಾಜ ಸುಧಾರಣೆ ಕಾರ್ಯಗತವಾಗಿವೆಯೆ? ಅಂದು ಎಂತಹ ಕೆಟ್ಟದ್ದನ್ನೆಲ್ಲಾ ಅವರು ಖಂಡಿಸಿ ಹೀಗಳೆದಿದ್ದರೋ ಅವೆಲ್ಲಾ ಇಂದೂ ಉಳಿದು ಕೊಂಡಿಲ್ಲವೇ? ಎಂದರೆ ಅದನ್ನು ಪೂರ್ಣ ನಿರ್ಮೂಲ ಮಾಡುವುದು ಅಸಾಧ್ಯವೇ. ಏನಿಲ್ಲದಿದ್ದರೂ ಭಜನೆಮಾಡುವ ಕಾಲದಲ್ಲಾದರೂ ಅಂತಹ ವಿಚಾರಗಳು ಬಿಟ್ಟು ತಾನು ಅಂತಹದನ್ನು ಮಾಡುವುದು ತಪ್ಪೆಂಬ ಅರಿವನ್ನು ಅಂತರಂಗದಲ್ಲಾದರೂ ಮೂಡಿಸುವಂತಾದರೆ ಅಷ್ಟಾದರೂ ಅವುಗಳ ಪ್ರಯೋಜನ ಅಲ್ಪವಲ್ಲ. ಕಲಿಯಲು ಹಾಡಲು ಬಲು ಸುಲಭವಾದುದರಿಂದಲೇ ಕೀರ್ತನೆಗಳು ಇನ್ನೂ ಜೀವಂತವಾಗಿವೆ. "ಬಿಗಿ ಕಟ್ಟಿಲ್ಲದೆ ಸಹಜ ಮನೋಹರವಾದ ಗೇಯತೆಯನ್ನು ಪಡೆಮದು ಹರಿದಾಸ ಸಾಹಿತ್ಯದ ವೈಷ್ಟ" ಎಂದು ಶ್ರೀ ಮುಗಳಿಯವರು ಹೇಳಿರುವುದು ಯಥಾರ್ಥ. ಮತವನ್ನು ಮೀರಿದ ಸಾರ್ವಕಾಲಿಕ ಸಾರ್ವಲೌಕಿಕ ಅಂಶಗಳನ್ನೊಳಗೊಂಡಿರುವುದೂ ಕೀರ್ತನೆಗಳು ಜನರ ಬಾಯಲ್ಲಿ ನೆಲಸಲು ಇನ್ನೊಂದು ಕಾರಣ. ಮಾನವೀಯ ಗುಣವುಳ್ಳ ಮಹಾ ವ್ಯಕ್ತಿಗಳ ಸಾತ್ವಿಕ ಪರಿತಾಪದ ಪ್ರಾಮಾಣಿಕ ಸರಳ ಅಭಿವ್ಯಕ್ತಿಗಳು ಕೀರ್ತನೆಗಳು. ಇಂತಹ ಗುಣ ಕಡಿಮೆಯಾದಾಗ ಅದು ಸರ್ವಾದರಣೀಯವಾಗುವುದಿಲ್ಲ. ಈ ದೃಷ್ಟಿಯಿಂದ ಹರಿದಾಸ ಸಾಹಿತ್ಯ ಕೇವಲ ಒಂದು ಭಾಷೆಗೆ, ಒಂದು ಜನತೆಗೆ ಸಂಬಂಧಿಸಿಮದಲ್ಲ. ಅದು ವಿಶ್ವದ ಜನತೆಗೆ ಮಾನವ ಮಾತ್ರಕ್ಕೆ ಹರಿದಾಸರಿತ್ತ ಕೊಡುಗೆ. ಪುರಂದರ ಕನಕರಿಬ್ಬರೂ ಮಹಾ ಭಕ್ತರಂತೆ ಮಹಾಕವಿಯ ಸತ್ವವುಳ್ಳವರು.

ಕನಕರ "ಅಂತರಂಗದ ಆಳವನ್ನೂ ಭಕ್ತಿ ನಿರ್ಭರತೆಯನ್ನೂ ತಿಳಿಸುವ ಕೀರ್ತನೆಗಳು ಕನ್ನಡ ನುಡಿಗೆ ತೊಡವಾದ ಹಿರಿಯ ಭಾವಗೀತೆಗಳು" ಎಂಬುದಕ್ಕೆ ಸಂದೇಹವಿಲ್ಲ. ಕನಕವನ್ನು ಬಿಟ್ಟು ದಾಸರಾದರೂ ಕನಕದಷ್ಟು ಅಮೂಲ್ಯರಾದವರು ಎಂಬುದಕ್ಕಾಗಿ ಅವರ ಹೆಸರಿಂದ ಕನಕವು ದೂರವಾಗಿಲ್ಲ. ಕನಕ ದಾಸರ ಕೀರ್ತನೆಗಳು ಕನ್ನಡ ವಾಙ್ಮಯದಲ್ಲಿ ಎಂದೂ ಅಳಿಯದ ಅಪ್ಪಟ ಕನಕ ಸಾಹಿತ್ಯ.

# ಕನಕದಾಸರ ಕೀರ್ತನೆಗಳಲ್ಲಿ ಕೆಲವು ಛಂದೋರೂಪಗಳು

**ಕೆ. ಜಿ. ನಾರಾಯಣ ಪ್ರಸಾದ್,**

ಕನ್ನಡ ಅಧ್ಯಯನ ಸಂಸ್ಥೆ,

ಮಾನಸ ಗಂಗೋತ್ರಿ, ಮೈಸೂರು.

ಪದ್ಯವನ್ನು ಗದ್ಯದಿಂದ ಬೇರ್ಪಡಿಸುವ ವಿಶಿಷ್ಟ ನಾದ ವಿನ್ಯಾಸದ ರಚನಾವಿಧಾನವೇ ಛಂದಸ್ಸು ಎಂದು ಹೇಳಬಹುದು. ಅದು ಗದ್ಯಪದ್ಯಗಳ ನಡುವಿನ ಬೇರ್ಪಡಿಕೆಯ ಪ್ರಧಾನ ಅಂಶವಾಗಿದೆ. ಪದ್ಯದಲ್ಲಿ, ಸಂಗೀತಕೃತಿಗಳು ಮತ್ತು ಅವಕ್ಕಿಂತ ಭಿನ್ನವಾದವು ಎಂದು ಎರಡು ಪ್ರಕಾರಗಳನ್ನು ಗುರುತಿಸಬಹುದು. ಈ ಎರಡರ ಛಂದೋರಚನೆಯೂ ಒಂದೇ ಆಗಿರುವುದು ಎಲ್ಲ ಸಂದರ್ಭಗಳಲ್ಲಿಯೂ ಸಾಧ್ಯವಿಲ್ಲವಾದುದರಿಂದ ಇವುಗಳ ಛಂದಸ್ಸನ್ನು ಕ್ರಮವಾಗಿ ಸಂಗೀತದ ಛಂದಸ್ಸು ಮತ್ತು ಕವಿತೆಯ ಅಥವಾ ಕಾವ್ಯದ ಛಂದಸ್ಸು ಎಂಬುದಾಗಿ ಕರೆಯಬಹುದು. ಕವಿತೆಯ ಅಥವಾ ಕಾವ್ಯದ ಛಂದಸ್ಸು, ಅಕ್ಷರ, ವರ್ಣ, ವರ್ಣಮಾತ್ರೆ, ತಾಳಮಾತ್ರೆ ಮತ್ತು ಅಂಶ ಈ ಮೂಲ ಘಟಕಗಳಲ್ಲಿ ಯಾವುದಾದರೊಂದರಿಂದ ರೂಪುಗೊಳ್ಳುತ್ತದೆ. ಆದ್ದರಿಂದ ಈ ಮೂಲಘಟಕಗಳ ಆಧಾರದ ಮೇಲೆ ಈ ಛಂದಸ್ಸನ್ನು ಅಳೆಯಬಹುದು. ಆದರೆ ಇವನ್ನು ಬಳಸಿಕೊಂಡು ಸಂಗೀತದ ಛಂದಸ್ಸನ್ನು ಅಳೆಯುವುದಕ್ಕಾಗುವುದಿಲ್ಲ. ಏಕೆಂದರೆ ಅದು ರಾಗ ತಾಳಾದಿಗಳನ್ನು ಅವಲಂಬಿಸಿ ರೂಪುಗೊಳ್ಳುವಂತಹುದು. ಕವಿತೆಗಳನ್ನೆಲ್ಲ ಸಂಗೀತದ ಛಂದಸ್ಸಿಗೆ ಅಳವಡಿಸಬಹುದಾದರೂ, ಎಲ್ಲ ಸಂಗೀತಕೃತಿಗಳನ್ನೂ ಕವಿತೆಯ ಛಂದಸ್ಸಿನ ಚೌಕಟ್ಟಿಗೆ ಅಳವಡಿಸಲು ಬರುವುದಿಲ್ಲ. ಕೆಲವೊಮ್ಮೆ ಹಿಡಿತಕ್ಕೆ ಸಿಕ್ಕಿದಂತೆ ಕಂಡರೆ ಹಲವೊಮ್ಮೆ ಈ ಚೌಕಟ್ಟನ್ನು ಮೀರಿ ವ್ಯಾಪಿಸುವುದು ಅವುಗಳಲ್ಲಿ ಸಹಜ. ಆದ್ದರಿಂದ, ಕವಿತೆಯ ಛಂದಸ್ಸಿನ ಹಿಡಿತಕ್ಕೆ ಸಿಕ್ಕಬಹುದಾದಂತಹ ಕೃತಿಗಳನ್ನೂ ಕೃತಿ ಭಾಗಗಳನ್ನೂ ಆಯ್ದುಕೊಂಡು ಕನಕದಾಸರ ಕೀರ್ತನೆಗಳಲ್ಲಿ ಕಂಡುಬರುವ, ಅಥವಾ ಗುರುತಿಸಬಹುದಾದ, ಛಂದೋರೂಪಗಳು ಯಾವುವು ಎಂಬುದರ ಬಗ್ಗೆ ವಿಚಾರಮಾಡುವುದು ಪ್ರಕೃತ ಪ್ರಬಂಧದ ಉದ್ದೇಶ. ಬಿ. ಶಿವಮೂರ್ತಿ ಶಾಸ್ತ್ರಿಗಳೂ, ಕೆ. ಎಂ. ಕೃಷ್ಣರಾವ್ ಅವರೂ ಒಟ್ಟಾಗಿ ಸಂಪಾದಿಸಿರುವ 'ಕನಕದಾಸರ ಕೀರ್ತನೆಗಳು'(ಪ್ರ : ರಾಜ್ಯ ಸಮಿತಿ, ಶ್ರೀ ಕನಕದಾಸರ ನಾಲ್ಕನೆಯ ಶತಮಾನೋತ್ಸವ, ಮೈಸೂರು ಸರ್ಕಾರ, ಬೆಂಗಳೂರು, 1965.) ಎಂಬ ಕೃತಿಯನ್ನು, ಈ ಸಂಬಂಧದಲ್ಲಿ, ಕೀರ್ತನೆಗಳ ಆಕರವಾಗಿ ತೆಗೆದುಕೊಂಡಿದೆ.

ಕನಕದಾಸರು ಜನಸಾಮಾನ್ಯರ ಜೀವನ ವಿಧಾನ, ಸಂಸ್ಕೃತಿ, ಆಚಾರ ವಿಚಾರಗಳು, ಹಾಡುಗಳು ಮುಂತಾದುವೆಲ್ಲದರ ಪರಿಚಯವನ್ನು ಚೆನ್ನಾಗಿ ಹೊಂದಿದ್ದವರು. ಅವರ ದನಿ, ಸಾಮಾನ್ಯಜನರ ನಡುವಿನಿಂದ, ಸಾಮಾನ್ಯ ಜನರಿಗಾಗಿ ಮೂಡುವಂತಹುದಾಗಿದೆ. ಹಾಗಾಗಿ, ಅವರ ಕೀರ್ತನೆಗಳಲ್ಲಿ, ತಾಳ ತಂಬೂರಿಗಳಿಗೊಗ್ಗುವ ಹಾಗೂ ಸಾಮಾನ್ಯ ಜನರಿಗೆ ಸುಲಭವಾಗಿ ತಲಪುವ ಅಂಶಬಂಧಗಳು ಮತ್ತು ತಾಳ ಮಾತ್ರಾಬಂಧಗಳನ್ನೇ ವಿಶೇಷವಾಗಿ ಗುರುತಿಸಬಹುದು.

1. ಅಂಶಬಂಧಗಳು : ಅಂಶಬಂಧಗಳಲ್ಲೆಲ್ಲ ಚಿಕ್ಕದು ಚೌಪದಿ. ಪ್ರತಿಪಾದದಲ್ಲೂ ಒಂದು ವಿಷ್ಣು ಒಂದು ರುದ್ರ ಈ ರೀತಿಯ ಗಣರಚನೆಯಿರುವ ಸಮಪದಿ ಬಂಧ ಇದು. ಬಹಳ ಚಿಕ್ಕದಾದ ಕಾರಣದಿಂದಾಗಿಯೇ ಇದು ಬಳಕೆಗೆ ಬರಲಿಲ್ಲವೆನ್ನಬಹುದು. ಕನಕದಾಸರಲ್ಲಿ ಕೂಡ ಈ ಬಂಧ ಬಳಕೆಯಾಗಿಲ್ಲ. ಆದರೆ ಇದಕ್ಕೆ ಸಮೀಪವಾದೊಂದು ಬಂಧ ಮಾತ್ರ ಬಳಕೆಯಾಗಿದೆ. ಉದಾಹರಣೆಗೆ,

| | |
|---|---|
| ಮಕ್ಕಳ. ಪಡೆದವರು. (ಇಲ್ಲದ ಕಳ | ವಿ. ರು. (ಪ್ರ |
| ವಿಕ್ಕಬಿ. ಹುದೆ ಕೃಷ್ಣಗೆ. | ವಿ. ರು. |
| ಲೆಕ್ಕಿಸ. ದಾತಪ್ಪ. ಒಪ್ಪಿಸಿ. ದಾದರೆ. | ವಿ. ವಿ. ವಿ. ವಿ. |
| ತಕ್ಕಬು. ದ್ಧಿಯ ಹೇಳುವೆ. | ವಿ. ರು. |

ಅಂಶಚೌಪದಿಯಲ್ಲಿ ಮೂರನೆಯ ಪಾದದ ಸ್ಥಾನದಲ್ಲಿ ನಾಲ್ಕು ವಿಷ್ಣುಗಣಗಳ ಒಂದು ಪಾದವನ್ನೂ, ಮೊದಲ ಪಾದದ ಅಂತ್ಯದಲ್ಲಿ ಒಂದು ಪ್ರತ್ಯೇಕಗಣವನ್ನೂ ತರುವುದರ ಮೂಲಕ ರೂಪಿಸಲಾಗಿದೆಯೆಂದು ಈ ಬಂಧವನ್ನು ವಿವರಿಸಬಹುದು. ಪಾದಾಂತಯತಿ, ಬೇಗ ಬೇಗ ಬಂದು, ಉಂಟುಮಾಡುವ ಬೇಸರವನ್ನು ಈ ಎರಡು ಮಾರ್ಪಾಡುಗಳೂ ನಿವಾರಿಸಿ ಬಂಧಕ್ಕೆ ಹೊಸತನವನ್ನು ತಂದುಕೊಟ್ಟಿವೆ. ಈ ಬಂಧಕ್ಕೆ ಉದಾಹರಣೆಯಾಗಿ ಈ ನುಡಿಯನ್ನೂ ನೋಡಬಹುದು :

| | |
|---|---|
| ಅಣು ಘನ. ರೂಪಕಾಣೆ. (ನಿನ್ನೀ ಮಗ | ವಿ. ರು. (ಪ್ರ |
| ಚಿನುಮಯ. ರೂಪ ಕಾಣೆ. | ವಿ. ರು. |
| ಘನಮಹಿ. ಮನುಸಿರಿ. ಕಾಗಿನೆ. ಲೆ(s) ಯಾದಿ. | ವಿ. ವಿ. ವಿ. ವಿ. |
| ಕೇಶವ. ರಾಯ ಕಾಣೆ. | ವಿ. ರು. |

ಎರಡು ವಿಷ್ಣುಗಣ ಕೊನೆಗೊಂದು ರುದ್ರಗಣ -- ಈ ರಚನೆಯ ಪಾದಗಳಿಂದಾದ ಸಮಚೌಪದಿ ಕಿರಿಯಕ್ಕರ ವೆನಿಸುತ್ತದೆ. ಶುದ್ಧರೂಪದ ಕಿರಿಯಕ್ಕರದ ಬಳಕೆ ಕೂಡ ಕನಕದಾಸರಲ್ಲಿ ಕಂಡುಬರುವುದಿಲ್ಲ. ಆದರೆ ಅದಕ್ಕೆ ಸಮೀಪವರ್ತಿಯಾದ ಬಂಧವೊಂದರ ಬಳಕೆಯನ್ನು ಮಾತ್ರ ಅವರ 30, 115 ಮತ್ತು 217 ನೆಯ ಕೀರ್ತನೆಗಳಲ್ಲಿ ಕಾಣುತ್ತೇವೆ. ಉದಾಹರಣೆಗೆ,

(1) ನೀರನು. ಕಂಡರೆ. ಮುಳುಗುತಿದೆ. (ತನ್ನ ವಿ. ವಿ. ರು. (ಪ್ರ
ಮೋರೆಯ. ತೋರದೆ. ಓಡುತಿದೆ. ವಿ. ವಿ. ರು.
ಧಾರಿಣಿ. ಅಲ್ಲಲ್ಲಿ. ಅಳೆಯುತಿದೆ. (ದೊಡ್ಡ ವಿ. ವಿ. ರು. (ಪ್ರ
ಭೈರವಾ. ಕಾರದಿ. ಕೂಗುತಿದೆ. ವಿ. ವಿ. ರು.
(ಕೀ. 217)

(2) ವಸುದೇವ. ನುದರದಿ. ಪುಟ್ಟಿದನೆ. (ಪಲ್ ವಿ. ವಿ. ರು. (ಪ್ರ
ಮಸೆದ ದ. ನುಜರೊಡ. ಗುಟ್ಟಿದನೆ. ವಿ. ವಿ. ರು.
ಎಸೆವ ಕಾ. ಳಿಂಗನ. ಮೆಟ್ಟಿದನೆ. (ಬಾ ವಿ. ವಿ. ರು. (ಪ್ರ
ಧಿಸುವರ. ನ್ಯಮಪುರ. ಕಟ್ಟಿದನೆ. ವಿ. ವಿ. ರು.
(ಕೀ. 115)

ಒಂದು ಮೂರನೆಯ ಪಾದಗಳ ಅಂತ್ಯದಲ್ಲಿ ಬರುವ ಪ್ರತ್ಯೇಕಗಣವು ಮುಂದಿನ ಪಾದದತ್ತ ವಿಶೇಷ ಮಿಾಟು ಕೊಡುವುದರ ಮೂಲಕ, ಬಂಧದ ಏಕತಾನತೆಯನ್ನು ಬಹಳಷ್ಟು ಕಡಿಮೆ ಮಾಡಿದೆ.

ತ್ರಿಗಣಪಾದಗಳ ನಡುವೆ ಮೂರನೆಯ ಪಾದದ ಸ್ಥಾನದಲ್ಲಿ ಚತುರ್ಗಣ ಪಾದವೊಂದನ್ನು ತರುವುದರ ಮೂಲಕ ಹೊಸರೀತಿಯ ಚೌಪದಿಯೊಂದನ್ನು ರೂಪಿಸುವುದು ಸಾಧ್ಯವಿದೆ. ಅಂತಹ ಒಂದು ಬಂಧವನ್ನು ಕೂಡ ಕನಕದಾಸರಲ್ಲಿ ಕಾಣಬಹುದು. ಮಾದರಿಗೆ,

ಕೋಲು ಕೊ.ಳಲು ಕೈಲಿ. ದಾಸಯ್ಯ. ವಿ. ವಿ. ವಿ.
ಕಲ್ಲಿಗೆ. ವರವಿತ್ತೆ. ದಾಸಯ್ಯ. ವಿ. ವಿ. ವಿ.
ಮಲ್ಲನ. ಮರ್ದಿಸಿ. ಮಾವನ. ಮಡುಹಿದ. ವಿ. ವಿ. ವಿ. ವಿ.
ನೀಲ ಮೇ. ಘಶ್ಯಾಮ. ದಾಸಯ್ಯ. ವಿ. ವಿ. ವಿ.
(ಕೀ. 158)

ಇಂತಹ ಬಂಧಗಳಲ್ಲಿ, ಮೊದಲ ಎರಡು ಪಾದಗಳ ಅಂತ್ಯದಲ್ಲಿ ನಿಂತು ನಿಂತು ಸಾಗಿದ ಭಾವವು ಮೂರನೆಯದರ ಅಂತ್ಯದಲ್ಲಿ ಮುಗಿಯದೆ ಮುಂದುವರಿದು ನಾಲ್ಕನೆಯದರ ಅಂತ್ಯದಲ್ಲಿ ಮುಕ್ತಾಯವನ್ನು ತಲಪುತ್ತದೆ. ಕಿರಿಯಕ್ಕರದ ರುದ್ರಕ್ಕೆ ಬದಲು ವಿಷ್ಣುವೇ ಬಂದಿರುವುದು ಕೂಡ ಇಲ್ಲಿ ಗಮನಾರ್ಹ.

ಇದರಲ್ಲೇ ಮೊದಲ ಪಾದದ ಅಂತ್ಯದಲ್ಲಿ ವೈವಿಧ್ಯಕ್ಕಾಗಿ ಪ್ರತ್ಯೇಕ ಗಣವನ್ನು ತರುವುದೂ ಉಂಟು. ಅಂತಹದಕ್ಕೆ ಉದಾಹರಣೆಯಾಗಿ ಈ ನುಡಿಯನ್ನು ನೋಡಬಹುದು:

ಗಿರಿಯನು. ನೆಗಹಿದೆ. ದಾಸಯ್ಯ. ವಿ. ವಿ. ವಿ.
ಇರುಳುಹ. ಗಲು ನಿನ್ನ. ಕಾಣದೆ. ಇರಲಾರೆ. ವಿ. ವಿ. ವಿ. ವಿ.
ಮರುಳು ಮಾ. ಡು(s)ವಂಥ. ದಾಸಯ್ಯ. ವಿ. ವಿ. ವಿ.

ಇದರಲ್ಲೇ ಮೂರನೆಯ ಪಾದದಲ್ಲೂ ಅಂತ್ಯದ ವಿಷ್ಣುವಿಗೆ ಬದಲು ಪ್ರತ್ಯೇಕ ಗಣವನ್ನು ತಂದಾಗ ಮತ್ತೊಂದು ರೀತಿಯ ಅರ್ಧಸಮಚೌಪದಿ ರೂಪಿತವಾಗುತ್ತದೆ. ಅಂತಹ ಬಂಧವೊಂದಕ್ಕೆ ಮತ್ತೊಂದು ರೀತಿಯ ತ್ರಿಪದಿಯೊಂದನ್ನು ಕೂಡಿಸಿ ರೂಪಿಸಿರುವ ಸಪ್ತಪದಿ ಬಂಧವೊಂದನ್ನು "ಅಂಧಂತಮಸ್ಸುಮತ್ತಿನ್ನಾರಿಗೆ" ಎಂಬ ಕೀರ್ತನೆಯಲ್ಲಿ ಕಾಣುತ್ತೇವೆ. ಮಾದರಿಗೆ,

ಮಾತು ಮಾ. ತಿಗೆ ಹರಿಯ. ನಿಂದಿಸಿ. (ಸ ವಿ. ರು. ವಿ. (ಪ್ರ
ರ್ವೋತ್ತಮ. ಶಿವನೆಂದು. ಸಾಧಿಸಿ. ವಿ. ವಿ. ವಿ.
ಧಾತು ಗ್ರಂ. ಥಗಳೆಲ್ಲ. ತೋರಿಸಿ. (ವೇ ವಿ. ವಿ. ವಿ. (ಪ್ರ
ದಾಂತ ಪ್ರ. ಮಾಣಗ. ಳ್ಹಾರಿಸಿ. ವಿ. ವಿ. ವಿ.
ಸೋತು ಸಂ. ಕಟಪಟ್ಟು. ವಿ. ವಿ.
ಪಾತಕ. ಒಡಲೊಳಿಟ್ಟು. ವಿ. ರು.
ನೀತಿ ಹೇ. ಳುವ ಕೆಟ್ಟ. ಜಾತಿಗಳಿ. ಗಲ್ಲದೆ. ವಿ. ವಿ. ರು. ವಿ.
(ಕೀ. 39)

ನಿರೀಕ್ಷೆಯೊಡನೆ ಕೊನೆಗೊಳ್ಳುವ ಈ ನುಡಿಗೆ, ಮುಕ್ತಾಯ ದೊರೆಯುವುದು,

ಅಂಧಂತ ಮಸ್ಸು ಮ. ತ್ತಿನ್ನಾರಿಗೆ. (ಗೋ ವಿ. ವಿ. ರು. (ಪ್ರ
ವಿಂದನ. ನಿಂದಿಸು. ವವರಿಗೆ. ವಿ. ವಿ. ವಿ.

ಎಂಬ ಪಲ್ಲವಿಯ ಕೊನೆಯಲ್ಲಿಯೇ.

ಒಂದು ಮೂರನೆಯ ಪಾದಗಳ ಅಂತ್ಯದಲ್ಲಿ ಪ್ರತ್ಯೇಕಗಣ ಬರುವಂತಹ ಚೌಪದಿಯ ಮತ್ತೊಂದು ಪ್ರಕಾರವನ್ನು ಕೂಡ ಕನಕದಾಸರಲ್ಲಿ ಕಾಣುತ್ತೇವೆ. ಮಾದರಿಗೆ ಈ ನುಡಿಯನ್ನು ನೋಡಬಹುದು:

ಅಡಿಯನಂ. ಬರ ಮಾಡ. ದನಕ. (ಅಗ್ನಿ ವಿ. ವಿ. ಬ್ರ. (ಪ್ರ
ಕಿಡಿಯೆದ್ದು. ಮೇಲಣ. ಕೊಡನುಕ್ಕ. ದನಕ. ವಿ. ವಿ. ವಿ. ಬ್ರ.
ಒಡನೆರ. ಡೊಂದಾಗ. ದನಕ. (ಅಲ್ಲಿ ವಿ. ವಿ. ಬ್ರ. (ಪ್ರ
ಒಡಗೂಡಿ. ಅಂಗನೆ. ನುಡಿಕೇಳಿ. ದನಕ. ವಿ. ವಿ. ವಿ. ಬ್ರ.
(ಕೀ. 157)

ವಿ.ಬ್ರ.ವಿ., ವಿ.ವಿ.ಬ್ರ.ವಿ., ವಿ.ಬ್ರ.ವಿ., ವಿ.ವಿ.ಬ್ರ.ವಿ. ಎಂಬುದು ಗೀತಿಕೆಯ ಲಕ್ಷಣ ವೆಂದು ಪರಿಗಣಿಸುವುದಾದರೆ ಈ ಬಂಧವು ಅಂತಹ ಗೀತಿಕೆಗೆ ಬಹಳ ಸಮೀಪವಾಗಿ ದೆಯೆಂಬುದನ್ನು ಗಮನಿಸಬೇಕು.

ಸಾಂಪ್ರದಾಯಿಕ ತ್ರಿಪದಿಗಳಿಂದ ರೂಪಿತವಾಗುವಂತಹ ಚೌಪದಿಗೆ ಸಮೀಪ ವಾದ ಬಂಧವನ್ನು ಕೂಡ ಕನಕದಾಸರು ಬಳಸಿದ್ದಾರೆ. ಮಾದರಿಗೆ ಈ ನುಡಿಯನ್ನು ನೋಡಬಹುದು :

| | |
|---|---|
| ತಾಯ ಮಾ. ತನು ಕೇಳಿ. ಸಾಸಿರ. ತೋಳಿನ. | ವಿ. ವಿ. ವಿ. ವಿ. |
| ಆವಿನ. ಕಳ್ಳನ. ಕೊಂದಾನ್ಕಾ | ವಿ. ವಿ. ವಿ. |
| ಆವಿನ, ಕಳ್ಳನ. ಕೊಂದು. ಭೂಮಿಯ. | ವಿ. ವಿ. ಬ್ರ. ವಿ. |
| ಅವನಿ ಸು. ರ(s)ರಿಗೆ. ಇತ್ತಾನ್ಕಾ | ವಿ. ವಿ. ವಿ. |

(ಕೀ. 120)

ತ್ರಿಪದಿಯ ಆರು, ಹತ್ತರ ಬ್ರಹ್ಮದ ನಿಯತತೆ ಇಲ್ಲಿಲ್ಲ. ಇದರಿಂದಾಗಿ ಇದು ತ್ರಿಪದಿ ಗಿಂತ ದೂರವಾಗಿ, ಸೊಬಗಿನ ಸೋನೆಯ ಮಟ್ಟಿಗೆ ಸಮೀಪವಾಗಿ ನಿಲ್ಲುತ್ತದೆ. ಎರಡು ಮೂರನೆಯ ಪಾದಗಳಲ್ಲಿ ಕಂಡುಬರುವ ಶಬ್ದಗಳ ಪುನರಾವರ್ತನೆ ಮಾತ್ರ ತ್ರಿಪದಿಯತ್ತ ಎಳೆಯುತ್ತದೆ ಅಷ್ಟೆ.

ಕನಕದಾಸರು ತಮ್ಮ ಕೀರ್ತನೆಗಳಿಗೆ, ಸಾಂಗತ್ಯವನ್ನು ಬಳಸಿಬುವುದು ಎಲ್ಲಿಯೂ ಕಂಡು ಬರುವುದಿಲ್ಲ. ಅದನ್ನು 'ಮೋಹನ ತರಂಗಿಣಿ'ಗೇ ಮೀಸಲಾಗಿಟ್ಟಿರುವಂತಿದೆ.

ಇನ್ನು ಚತುರ್ಗಣಪಾದದ ಸಮಪದಿಬಂಧ. ಏಳೆ, ತ್ರಿಪದಿಗಳಿಗೆ ಸಮೀಪಸಂ ಬಂಧಿಯಾದ ಒಂದು ಚೌಪದಿಯ ಮಾದರಿ ಅವರ ಒಂದು ಕೀರ್ತನೆಯಲ್ಲಿ ಕಂಡು ಬರುತ್ತದೆ. ಮಾದರಿಗೆ,

| | |
|---|---|
| ಹರಿಯ ನುಂ. ಗಿತು ಹರ. ಬ್ರಹ್ಮರ. ನುಂಗಿತು. | ವಿ. ವಿ. ವಿ. ವಿ. |
| ಸುರರಿಗುಂ. ಟಾದ. ದೇವರ. ನುಂಗಿತು. | ವಿ. ಬ್ರ. ವಿ. ವಿ. |
| ಉರಿಗಣ್ಣ. ಶಿವನ ಒಂ. ದೆಲೆ ನುಂಗಿ. ತೆಲೊ ದೇವ. | ವಿ. ವಿ. ವಿ. ವಿ. |
| ಹರಿಯ ಬ. ಳಗವ. ಒಂದೆಲೆ. ನುಂಗಿತು. | ವಿ. ಬ್ರ. ವಿ. ವಿ. |

(ಕೀ. 216)

ತ್ರಿಪದಿಯನ್ನು ಮೂರು ಪಾದಗಳ ಬಂಧವಾಗಿ ಪರಿಗಣಿಸಿದಲ್ಲಿ ಅದರ ಮೊದಲು ಎರಡು ಪಾದಗಳನ್ನೇ ನುಡಿಯ ಅರ್ಧಭಾಗವಾಗಿ ಪರಿಗಣಿಸಿ ಅಂತಹುದೇ ಮತ್ತೊಂದು ಅರ್ಧವನ್ನು ಕೂಡಿಸುವುದರಿಂದ ಈ ನುಡಿ ರೂಪಿತವಾಗಿದೆಯೆನ್ನಬಹುದು. ಈ ದೃಷ್ಟಿ ಯಿಂದ ಇದು ತ್ರಿಪದಿಗೆ ಸಮೀಪಸಂಬಂಧಿ. ಏಳೆಯ ಕೊನೆಗೆ ಒಂದೊಂದು ವಿಷ್ಣುಗಣ ವನ್ನು ಅಧಿಕವಾಗಿ ಸೇರಿಸುವುದರಿಂದ ಈ ನುಡಿಯ ಎರಡೂ ಅರ್ಧಗಳು ರೂಪಿತವಾ ಗಿದೆಯೆಂದಾಗ ಇದು ಏಳೆಗೆ ಸಮೀಪ ಸಂಬಂಧಿಯಾಗುತ್ತದೆ. ಒಟ್ಟಾರೆ, ಇದು ಎರಡು ಬಂಧಗಳಿಗೂ ಸಮೀಪಸಂಬಂಧಿಯೇ.

ಮೂರು ವಿಷ್ಣುಗಣ, ಕೊನೆಗೊಂದು ಬ್ರಹ್ಮಗಣ - ಇಂತಹ ರಚನೆಯ ಪಾದಗಳಿಂದಾದ ಸಮಚೌಪದಿಯನ್ನು ಛಂದೋವತಂಸವೆನ್ನುತ್ತೇವೆ. ಇದರಿಂದ ರೂಪಿತವಾದ ವಿಶಿಷ್ಟ ದ್ವಿಪದಿಯೊಂದು ಕನಕದಾಸರಲ್ಲಿ ಬಳಕೆಯಾಗಿದೆ. ಮಾದರಿಗೆ,

ಕನಕನು. ಹೇಳಿದ. ಬೆಡಗು ಕಂ. ಡವರು ನೀವ್. ವಿ. ವಿ. ವಿ. ವಿ.
ಕೇಳಿತಿ. ಳಿದು ನಿಮ್ಮ ಮನದಲ್ಲಿ. ನೋಡಿ. ವಿ. ವಿ. ವಿ. ಬ್ರ.
(ಕೀ. 214)

ಇದರಲ್ಲೇ ಎರಡನೆಯ ಪಾದದಲ್ಲೂ ಬ್ರಹ್ಮಕ್ಕೆ ಬದಲು ವಿಷ್ಣುವನ್ನೇ ತಂದಲ್ಲಿ ರಗಳೆಯಲ್ಲಿಯಂತಹ ಪಾದರಚನೆ ಕಾಣಿಸಿಕೊಳ್ಳುತ್ತದೆ. ಅಂತಹ ರಚನೆಯ ದ್ವಿಪದಿ ಬಂಧಕ್ಕೆ ಮಾದರಿಯಾಗಿ ಕನಕದಾಸರ ಈ ಉದಾಹರಣೆಯನ್ನು ಗಮನಿಸಬಹುದು :

ಬತ್ತಿ ಹೋ. ಯಿತು ನದಿ. ಬಿತ್ತದೆ. ಬೆಳೆಯದೆ. ವಿ. ವಿ. ವಿ. ವಿ.
ಅತ್ತರೆ. ಬಹುದೇನೊ. ಉತ್ತಮ. ಫಲಸೂಸಿ. ವಿ. ವಿ. ವಿ. ವಿ.
(ಕೀ. 107)

ಇಂತಹ ನಾಲ್ಕು ದ್ವಿಪದಿಗಳನ್ನು ಬೆಸೆಯುವುದರ ಮೂಲಕ ರೂಪಿಸಿದ ಅಷ್ಟಪದಿ ಬಂಧವೊಂದನ್ನು ಕೂಡ ಕನಕದಾಸರಲ್ಲೇ ಕಾಣುತ್ತೇವೆ. ಉದಾಹರಣೆಗೆ :

ಕೇಸರಿ. ಎಂಬ ರ. ಕ್ಕಸರ ನೆ. ಲ್ಲರ ಕೊಂದ. ವಿ. ವಿ. ವಿ. ವಿ.
ವೇಷ ಧಾ. ರಿ(s)ಕಳ್ಳ, ಕೊಕೊಕೊ. ಎನ್ನಿರೊ. ವಿ. ವಿ. ವಿ. ವಿ.
ಮೋಸದಿ. ಬಲಿಯದಾ. ನವ ಬೇಡಿ. ಅನುದಿನ. ವಿ. ವಿ. ವಿ. ವಿ.
ಬೇಸರಿ. ಸಿದ ಕಳ್ಳ, ಕೊಕೊಕೊ. ಎನ್ನಿರೊ. ವಿ. ವಿ. ವಿ. ವಿ.
ಮಿಸಲ. ಅನ್ನವ. ಕೂಸಾಗಿ. ಸವಿದುಂಡ. ವಿ. ವಿ. ವಿ. ವಿ.
ವೇಷ ಧಾ. ರಿ(s)ಕಳ್ಳ, ಕೊಕೊಕೊ. ಎನ್ನಿರೊ. ವಿ. ವಿ. ವಿ. ವಿ.
ಸಾಸಿರ. ನಾಮಕ್ಕೆ. ಹೆಸರಾದ. ಛಪ್ಪನ್ನ. ವಿ. ವಿ. ವಿ. ವಿ.
ದೇಶ ಧಾ. ರಿ(s)ಕಳ್ಳ, ಕೊಕೊಕೊ. ಎನ್ನಿರೊ. ವಿ. ವಿ. ವಿ. ವಿ.
(ಕೀ. 201)

('ಕೊಕೊಕೊ' ಎಂಬುದನ್ನು 'ಕೊಕ್ಕೊಕ್ಕೊ' -ಎಂದು ಉಚ್ಚರಿಸಬೇಕಾಗುತ್ತದೆ.)

ಇದೇ ರೀತಿಯ ಹದಿನೆಂಟು ಪಾದಗಳ ಬಂಧವೊಂದನ್ನು ಕೂಡ ಕನಕದಾಸರು ಬಳಸಿದ್ದಾರೆ. ಆದರೆ ಅದರಲ್ಲಿ ಇಂತಹ ಹತ್ತು ಪಾದಗಳ ಕೊನೆಗೆ, ವಿ. ಬ್ರ. ವಿ. ವಿ. ರಚನೆಯ ಪಾದಗಳು ಏಳು ಬಂದು, 18 ನೆಯ ಪಾದ ಬ್ರಹ್ಮಾಂತ್ಯವಾಗಿದ್ದು ಸುದೀರ್ಘ ನುಡಿಗೆ ಸಮರ್ಥ ಮುಕ್ತಾಯವನ್ನೊದಗಿಸುತ್ತದೆ. ಉದಾಹರಣೆಗೆ,

ನರದೊಂಬೆ. ಗಳ ಮಾಡಿ. ಕುಣಿಸುವೆ. ಗೋವಿಂದ. ವಿ. ವಿ. ವಿ. ವಿ.
ನರರ ನೋ. ಡಿ(s) ನೋಡಿ. ನಗುತಿರ್ಪೆ. ಗೋವಿಂದ. ವಿ. ವಿ. ವಿ. ವಿ.

ಅರಿದೆನೆಂ. ಬರಿಗಂತ್ಯ. ತೋರದೊ. ಗೋವಿಂದ. ವಿ. ವಿ. ವಿ. ವಿ.
ಅರಿಯದಂ. ತಖಿಳದೊ. ಳಡಗಿರ್ಪೆ. ಗೋವಿಂದ. ವಿ. ವಿ. ವಿ. ವಿ.
ಅರಿಯಾಡಂ. ಬರಗಳಿ. ಗಳವಡದ. ಗೋವಿಂದ. ವಿ. ವಿ. ರು. ವಿ.
ಪರಮ ಪಾ. ವನ ನೆಂಬ. ಬಿರುದುಳ್ಳ. ಗೋವಿಂದ. ವಿ. ವಿ. ವಿ. ವಿ.
ಪರಮ ಪ್ರು. ರುಷ ಪುರು. ಷೋತ್ತಮ. ಗೋವಿಂದ. ವಿ. ವಿ. ವಿ. ವಿ.
ಪರಬ್ರಹ್ಮ ಪರಮ ಪ. ರಾತ್ಪರ. ಗೋವಿಂದ. ವಿ. ವಿ. ವಿ. ವಿ.
ಮರೆಹೊಕ್ಕ ಭಕ್ತರ. ಸಲಹುವ. ಗೋವಿಂದ. ವಿ. ವಿ. ವಿ. ವಿ.
ಕರಿರಾಜ. ಕರೆಯಲೊ. ದಗಿ ಬಂದೆ. ಗೋವಿಂದ. ವಿ. ವಿ. ವಿ. ವಿ.
ಗರುಡಗ. ಮನ ಗೋ. ವಿಂದಕಿ. ನ್ನರಸಿದ್ಧ. ವಿ. ಬ್ರ. ವಿ. ವಿ.
ಗರುಡಸ. ನ್ನುತ ಗೋ. ವಿಂದ ಅ. ಪರಿಮಿತ. ವಿ. ಬ್ರ. ವಿ. ವಿ.
ಕರುಣಾಸಾ. ಗರ ಗೋ. ವಿಂದ ಅ. ರಿಯದಂಥ. ವಿ. ಬ್ರ. ವಿ. ವಿ.
ಪರಮ ಜ್ಯೋ. ತಿಯೆ ಗೋ. ವಿಂದ ಗಂ. ಗೆಯಪೆತ್ತ. ವಿ. ಬ್ರ. ವಿ. ವಿ.
ಚರಣ ನಿ. ರ್ಮಲ ಗೋ. ವಿಂದ ತೆ. ತ್ತಿಸ ಕೋಟಿ. ವಿ. ಬ್ರ. ವಿ. ವಿ.
ಸುರರ ಪೊ. ರೆವ ಗೋ. ವಿಂದ ಶ್ರೀ. ವೈಕುಂಠ. ವಿ. ಬ್ರ. ವಿ. ವಿ.
ಪುರದೊಳ. ಗಿಹ ಗೋ. ವಿಂದ ಅಚ್ಯು. ತಾನಂತ. ವಿ. ಬ್ರ. ರು. ವಿ.
ತಿರುಪತಿ. ನೆಲೆಯಾದಿ. ಕೇಶವ. ಹರಿಯೆಂ. ವಿ. ವಿ. ವಿ. ಬ್ರ.

(ಹದಿನೇಳನೆಯ ಪಾದದಲ್ಲಿ ವಿಷ್ಣುವಿಗೆ ಬದಲಾಗಿ ರುದ್ರಬಂದಿರುವುದು ಗಣಾದೇಶಕ್ರಮದಿಂದ.)

ಅಂಶಷಟ್ಪದಿಯ ಅರ್ಧಭಾಗದಿಂದ ರೂಪಿತವಾದ ವಿಷಮ ದ್ವಿಪದಿಗೆ ನಾಲ್ಕು ಗಣಗಳ ಎರಡು ಪಾದಗಳನ್ನು ಸೇರಿಸುವುದರ ಮೂಲಕ ರೂಪಿತವಾದ ಚೌಪದಿಯನ್ನು ಕೂಡ ಕನಕದಾಸರು ಬಳಸಿದ್ದಾರೆ. ಮಾದರಿಗೆ,

ಹರಿಯೆ ಸ. ರ್ವೋತ್ತಮ. ಹರಿಯೆ ಸ. ರ್ವೇಶ್ವರ. ವಿ. ವಿ. ವಿ.
ಹರಿಮಯ. ವೆಲ್ಲವೆ. ನುತ ತಿಳಿದು. ವಿ. ವಿ. ರು.
ಸಿರಿಕಾಗಿ. ನೆಲೆಯಾದಿ. ಕೇಶವ. ರಾಯನ. ವಿ. ವಿ. ವಿ. ವಿ.
ಚರಣಕ. ಮಲವ ಕೀ. ರ್ತಿಸುವನೆ. ಕುಲಜ. ವಿ. ವಿ. ವಿ. ಬ್ರ.

ಸೊಬಗಿನ ಸೋನೆಯ ಮಟ್ಟಿನ ಅರ್ಧಭಾಗಕ್ಕೆ ಬೇರೊಂದು ರಚನೆಯ ದ್ವಿಪದಿಯನ್ನು ಕೂಡಿಸಿ ರೂಪಿಸಿದ ಚೌಪದಿಯ ಬಳಕೆಯೂ ಅವರಲ್ಲುಂಟು. ಮಾದರಿಗೆ,

ಅಜಮಿಳ. ನಿಗೆ ನಿಜ. ಪದವಿಯ. ಕೊಟ್ಟಾನೆ. ವಿ. ವಿ. ವಿ. ವಿ.
ಕುಜನರೆ. ಲ್ಲರನು ವ. ರ್ಗಿಸಿದಾನೆ. ವಿ. ವಿ. ವಿ.

ತ್ರಿಜಗದ. ಲ್ಲಣತಾನು. ಭಜಕರ. ವಶವಾನ. ವಿ. ವಿ. ವಿ. ವಿ.

ಇದೇ ರೀತಿ, ಎರಡನೆಯ ಪಾದದಲ್ಲಿ ಒಂದು ಗಣ ಕಡಿಮೆಯಾಗಿರುವಂತಹ ಬಂಧವೊಂದನ್ನು ಕೂಡ ಅವರು ಬಳಸಿದ್ದಾರೆ. ಅವರಲ್ಲಿ ಕೊನೆಯ ಪಾದದ ಕೊನೆಯ ಗಣದಲ್ಲಿ ಬ್ರಹ್ಮಕ್ಕೆ ಬದಲು ವಿಷ್ಣುವನ್ನೇ ತಂದಿರುವುದು ಕೂಡ ಗಮನಿಸಬೇಕಾದ ಅಂಶ. ಉದಾಹರಣೆಗೆ,

ವೇಲಾಪು. ರದ ಚೆನ್ನ. ಕೇಶವ. ಸೇವೆಗೆ. ವಿ. ವಿ. ವಿ. ವಿ.
ಆಲಸ್ಯ. ವನು ಮಾಡದೆ. ವಿ. ರು.
ಕೋಲ ಹಿ. ಡಿದು ದ್ವಾರ. ಪಾಲಕ. ನಾಗುವೆ. ವಿ. ವಿ. ವಿ. ವಿ.
ನೀಲಕುಂತಳೆ ಕಲ್ಲ. ಬಿಟ್ಟು ಆ. ಕಡೆಸಾರೆ. ವಿ. ವಿ. ವಿ. ವಿ.

ಒಟ್ಟಾರೆ, ಕೊನೆಯಲ್ಲಿ ಒಂದು ದ್ವಿಪದಿಯನ್ನು ತರುವುದರ ಮೂಲಕ ನುಡಿಗೆ ಮುಕ್ತಾಯ ತರುವ ತಂತ್ರ ಇಲ್ಲಿದೆಯೆನ್ನಬಹುದು.

ಕೊನೆಯ ಉದಾಹರಣೆಯಲ್ಲಿಯ ನುಡಿರಚನೆಯಲ್ಲಿಯೇ ಅಂತ್ಯದ ದ್ವಿಪದಿ ಯನ್ನು ಆದಿಯಲ್ಲಿ ತರುವುದರ ಮೂಲಕ ಮತ್ತೊಂದು ರೀತಿಯ ಚೌಪದಿಯನ್ನು ರೂಪಿ ಸಬಹುದು. ಅಂತಹ ಎರಡು ಚೌಪದಿಗಳಿಂದ ರೂಪಿತವಾದ ಅಷ್ಟಪದಿಯನ್ನು ಕನಕ ದಾಸರು ಬಳಸಿದ್ದಾರೆ. ಮಾದರಿಗೆ,

ಉರಿಯೊಳು. ಜನಿಸಿದ. ವನ ನಿಜ. ತಂಗಿಯ. ವಿ. ವಿ. ವಿ. ವಿ.
ಸೆರಗ ಪಿ. ಡಿದ ಖಳ. ನಣ್ಣನ. ತಂಗಿಯ. ವಿ. ವಿ. ವಿ. ವಿ.
ವರನ ತ. ಲೆಯನುಕ. ತ್ತರಿಸಿದ. ಧೀರನ. ವಿ. ವಿ. ವಿ. ವಿ.
ಗುರುವಿನೊ. ಳುದಿಸಿಹನ. ವಿ. ರು.
ಶರವ ತ. ಪ್ಪಿಸಿ ತನ್ನ. ದಾಸರ್ಗೆ. ಅನುದಿನ. ವಿ. ವಿ. ವಿ. ವಿ.
ಕರೆದು ವ. ರವ ನಿತ್ತು. ಮನ್ನಿಸಿ. ಸಲಹುವ. ವಿ. ವಿ. ವಿ. ವಿ.
ಉರಗಗಿ. ರಿಯ ವೆಂಕ. ಟಾದಿಕೇ. ಶ(s)ವನ. ವಿ. ವಿ. ವಿ. ವಿ.
ಗರತಿ ನೀ. ಕರೆದು ತಾರೆ. ವಿ. ರು.

ಸಮತ್ರಿಪದಿಯೊಂದರ ಅಂತ್ಯದಲ್ಲಿ ಚಿಕ್ಕಪಾದವೊಂದನ್ನು ತರುವುದರ ಮೂಲಕ ರೂಪಿಸಿದ ಎರಡು ಚೌಪದಿಗಳ ಬೆಸುಗೆ ಇಲ್ಲಿದೆಯೆಂದು ಕೂಡ ಈ ಬಂಧವನ್ನು ವಿವ ರಿಸಬಹುದು.

ಅಂತ್ಯದ್ವಿಪದಿಯ ಚೌಪದಿಗೆ ಮತ್ತೊಂದು ಬಗೆಯ ಚೌಪದಿಯನ್ನು ಕೂಡಿಸುವು ದರಿಂದ ಇನ್ನೊಂದು ಬಗೆಯ ಅಷ್ಟಪದಿ ರೂಪಿತವಾಗುತ್ತದೆ. ಅಂತಪದಕ್ಕೆ ಉದಾಹರ ಣೆಯಾಗಿ ಕನಕದಾಸರ ಈ ನುಡಿಯನ್ನು ನೋಡಬಹುದು :

ಧೀರ ಸೋ. ಮಕ ವೇದ. ಚೋರ ತ. ಮನ ಸೀಳಿ. ವಿ. ವಿ. ವಿ. ವಿ.
ವಾರಿಧಿ. ಗಿಳಿದು ಪ. ರ್ವತವನ್ನೆತ್ತಿ. ವಿ. ವಿ. ರು.
ಧಾರಿಣಿ. ಯನು ಕದ್ದ. ದನುಜ ದ. ಲ್ಲಣನಾದ. ವಿ. ವಿ. ವಿ. ವಿ.
ನಾರಸಿಂ. ಹ ನಿನಗೆ. ಶರಣೆಂದೆ. ನಲ್ಲದೆ. ವಿ. ವಿ. ವಿ. ವಿ.
ನೀರ ಪೊ. ಕ್ಕವನೆಂದೆನೆ. (ಬೆನ್ನಿಲಿ. ಘನ್ನ. ವಿ. ರು. (ಪ್ರ
ಭಾರ ಪೊ. ತ್ತವ ನೆಂದೆನೆ. (ಮಣ್ಣ. ನಗೆದು. ವಿ. ರು. (ಪ್ರ
ದೇರ ಮೆ. ದ್ದವನೆಂದೆನೆ. (ರಕ್ಕಸನೊಳು. ವಿ. ರು. (ಪ್ರ
ಹೋರಿ ಹೊ. ಯ್ದ(s) ನೆಂದು. ಹೊಗಳಿದೆ. ನಲ್ಲದೆ. ವಿ. ವಿ. ವಿ. ವಿ.

ಐದನೆಯ ಪಾದದಲ್ಲಿ ಮುಕ್ತಾಯದ ಸೂಚನೆ ಕಾಣಿಸಿಕೊಂಡು ದೃಢಪಡುವಷ್ಟ ರಲ್ಲೇ ಪ್ರತ್ಯೇಕಗಣ ಬಂದು ಮುಂದಿನ ಪಾದಕ್ಕೆ ಎಳೆದೊಯ್ಯುತ್ತದೆ. ಇಂತಹುದೇ ಕ್ರಿಯೆ, ಆರು -- ಏಳನೆಯ ಪಾದಗಳ ಅಂತ್ಯದಲ್ಲಿ ಕೂಡ ನಡೆದು ಇಡೀ ಬಂಧಕ್ಕೆ ವಿಚಿತ್ರಗತಿ ಯನ್ನೊದಗಿಸುವುದು ಇಲ್ಲಿ ಗಮನಾರ್ಹ.

ನಾಲ್ಕು ವಿಷ್ಣು, ಕೊನೆಗೊಂದು ರುದ್ರ, ಇಂತಹ ನಾಲ್ಕು ಸಮಪಾದಗಳಿಂದಾ ದುದು ಮದನವತಿ. ಇಂತಹ ಒಂದು ನುಡಿಯ ಅರ್ಧಭಾಗವನ್ನೇ ಎಂದರೆ ಎರಡು ಪಾದಗಳನ್ನೇ ಒಂದೊಂದು ನುಡಿಯಾಗಿ ಕನಕ ದಾಸರು ಬಳಸಿದ್ದಾರೆ. ಮಾದರಿಗೆ,

1. ಅಂಜನೆ. ಯಾತ್ಮಜ. ಅಗಣಿತ. ಬಲವಂತ. ಭೀಮರಾಯ. ವಿ. ವಿ. ವಿ. ವಿ. ರು.
   ಕಂಜನಾ. ಭನ ದೂತ. ಕರುಣಿಸೊ. ಬಲವಂತ. ಭೀಮರಾಯ. ವಿ. ವಿ. ವಿ. ವಿ. ರು.
2. ಕಾಲಿಲ್ಲ. ದಾತನು. ಹತ್ತಿದ. ನಾಘುರ. ಚಂದಮಾಮಾ. ವಿ. ವಿ. ವಿ. ವಿ. ರು.
   ಕೈಯಿಲ್ಲ. ದಾತನು. ಕೊಯ್ದನು. ಆ ಹಣ್ಣು. ಚಂದಮಾಮಾ. ವಿ. ವಿ. ವಿ. ವಿ. ರು.

ಮದನವತಿಯಲ್ಲೇ ಪಾದಾಂತ್ಯದ ರುದ್ರಕ್ಕೆ ಬದಲಾಗಿ ವಿಷ್ಣುವನ್ನೇ ತರುವುದ ರಿಂದ ಮತ್ತೊಂದು ರೀತಿಯ ಬಂಧ ರೂಪಿತವಾಗುತ್ತದೆ. ಅಂತಹದಕ್ಕೆ ಈ ಉದಾ ಹರಣೆಯನ್ನು ಗಮನಿಸಬಹುದು :

ಅನಿಮಿಷ. ರಂದದಿ. ವನವಾಸ. ಕ್ಕೊದನಾ. ಶ್ರೀರಾಮ. ವಿ. ವಿ. ವಿ. ವಿ. ವಿ.
ಮನಸಿಜ. ನರಿಯ ತಂ. ದೆಯ ಭಕ್ಷಿ. ಪನ ಪೆತ್ತ. ಶ್ರೀರಾಮ. ವಿ. ವಿ. ವಿ. ವಿ. ವಿ.
ಘನ ಕೊಂಡು. ಕೊನೆಯಿಂದ. ಧರಣಿಯ. ತಾಳ್ದನ. ಶ್ರೀರಾಮ. ವಿ. ವಿ. ವಿ. ವಿ. ವಿ.
ದಿನಕರ. ನಳವೀ . ಪಗೆಯ ಗೆ. ದಾತನ. ಶ್ರೀರಾಮ. ವಿ. ವಿ. ವಿ. ವಿ. ವಿ.

ಪ್ರತಿಪಾದದ ಕೊನೆಯಲ್ಲಿಯೂ ನಿಯತವಾಗಿ ಆಗಿರುವ 'ಶ್ರೀರಾಮ' ಎಂಬ ಶಬ್ದದ ಪುನರಾವರ್ತನೆ, ಆಯಾಪಾದಗಳಿಗೆ ಮುಕ್ತಾಯ ಸೂಚಿಸುವಲ್ಲಿ ಸಫಲವಾಗಿದೆ.

ನಮ್ಮ ಪ್ರಾಚೀನ ಛಂದಶ್ಶಾಸ್ತ್ರಜ್ಞರು ಹೇಳಿರುವ ಅಂಶಬಂಧಗಳ ಸರಣಿಯಲ್ಲಿ ಬಿಟ್ಟು ಹೋಗಿರುವ ಬಂಧವೆಂದರೆ, ಮೊದಲಲ್ಲಿ ಒಂದು ಬ್ರಹ್ಮ ಕೊನೆಯಲ್ಲಿ ಒಂದು ರುದ್ರ, ನಡುವೆ ನಾಲ್ಕು ವಿಷ್ಣು - ಈ ರಚನೆಯ ಪಾದಗಳಿಂದಾದ ಸಮಚೌಪದಿ. ಇದರ ಸಮೀಪದ ಬಂಧವೊಂದನ್ನು ಕನಕದಾಸರು ಅಲ್ಲಲ್ಲಿ ಬಳಸಿದ್ದಾರೆ. ಅದರಲ್ಲಿ ಅವರು ಮಾಡಿಕೊಂಡಿರುವ ಮಾರ್ಪಾಡೆಂದರೆ ಆದಿಯ ಬ್ರಹ್ಮಕ್ಕೆ ಬದಲು ವಿಷ್ಣುವನ್ನೇ ತಂದಿರುವುದು ಮಾತ್ರ. ಉದಾಹರಣೆಗೆ,

1. ಹರಿಹರ. ಬ್ರಹ್ಮಾದಿ. ಗಳ ಭಂಗ. ಪಡಿಸಿದೆ. ಕರುಣವಿ. ಲ್ಲವೆ ನಿನಗೆ.
ಹರಿಶ್ಚಂದ್ರ. ನಳಚಕ್ರ. ವರ್ತಿಪೋ. ಡಶ ಮಹಾ. ರಾಯ ಪಾಂ. ಡ್ವರ ದಣಿಸಿ.
ತೋರಿಸಿದೆ. ಮನೆಮನೆ. ವಾರ್ತೆಗ. ಳಿಲ್ಲವ. ತಿರಿದುಂಡು. ಮರುಳುಗೊಂಡು.
ಪರರ ಪೀ. ಡಿಸಿ ಭ್ರಮೆ. ಪಟ್ಟುಪ. ಲಜ್ಜೆಯ ಕೆಟ್ಟು. ತಿರುಗುವಂ. ದದಿ ಮಾಡಿದೆ.

ವಿ. ವಿ. ವಿ. ವಿ. ವಿ. ರು.
ವಿ. ವಿ. ವಿ. ವಿ. ವಿ. ರು.
ರು. ವಿ. ವಿ. ವಿ. ವಿ. ರು.
ವಿ. ವಿ. ವಿ. ವಿ. ವಿ. ರು.

ಎರಡನೆಯ ಪಾದದ ಆದಿಯ ಗಣವನ್ನು ಶಿಥಿಲೋಚ್ಚಾರಣೆಯ ಮೂಲಕ ವಿಷ್ಣುವಿಗೆ ಸರಿದೂಗಿಸಬೇಕಾಗುತ್ತದೆ. ಅಂತೆಯೇ ಮೂರನೆಯ ಪಾದದ ಆದಿಯಲ್ಲಿ ರುದ್ರ ಗಣ ಬಂದಿದೆ; ಅದನ್ನು ಗಣಾದೇಶವೆಂದು ಭಾವಿಸಬಹುದು. 'ತೋರಿಸಿದೆ' ಎಂಬುದಕ್ಕೆ ಬದಲಾಗಿ 'ತೋರಿದೆ' ಎಂದಿದ್ದಲ್ಲಿ ಇದೂ ವಿಷ್ಣುವೇ ಆಗುತ್ತದೆ.

2. ಮಂಗಳ. ವೇದವ. ಹಿಂಗದೆ. ಕದ್ದು ಜ. ಲಂಗಳೊ. ಳಡಗಿಪ್ಪನ.
ಬೆಂಗೊಂಡು. ಬ್ಯಾಗವ. ನಂಗವ. ಸೀಳಿಜ. ಗಂಗಳ. ತಾಳ್ದವನ.
ಮಂಗಳ. ಮಹಿಮ ಭು. ಜಂಗ ಶ. ಯನ ನಾರಿ. ಭಂಗವ. ಕಾಯ್ದವನ.
ಹಿಂಗದೆ. ಕಾಗಿನೆಲೆ. ಯಾದಿ ಕೇ. ಶವ ನರ. ಸಿಂಗನ. ತೋರೆನಗೆ.

([illegible])

ವಿ. ವಿ. ವಿ. ವಿ. ವಿ. ರು.
ವಿ. ರು. ವಿ. ವಿ. ವಿ. ರು.

ಇಲ್ಲಿ ಕೂಡ ನಾಲ್ಕನೆಯ ಪಾದದ ಎರಡನೆಯ ಗಣದ ಸ್ಥಾನದಲ್ಲಿ ರುದ್ರ ಬಂದಿರುವುದನ್ನು ಗಣಾದೇಶ ಸೌಲಭ್ಯದ ಫಲವೆಂದು ಭಾವಿಸಬಹುದು.

ಒಂದು - ಐದನೆಯ ಗಣಗಳಿಗೆ ಆದಿಪ್ರಾಸ ಬಂದಾಗ ಇದೇ ಅಷ್ಟಪದಿಯಾಗಿ ಕಾಣುವುದೂ ಸಹಜ. ಅಂತಹ ಒಂದು ಮಾದರಿಯನ್ನು 233 ನೆಯ ಕೀರ್ತನೆಯಲ್ಲಿ ಕಾಣಬಹುದು. ಉದಾಹರಣೆಗೆ,

| | |
|---|---|
| ಬಿಡುಗಣ್ಣ. ಬಾಲೆ ತ. ನ್ನೊಡೆಯನ. ನುಡಿಗೇಳಿ. | ವಿ. ವಿ. ವಿ. ವಿ. |
| ದೃಢದಿಂದ. ನಡೆದು ಬಂದು. | ವಿ. ರು. |
| ಝುಡಿವ ಕೋ. ಪಕೆ ಶಾಪ. ವಿಡಿಕೊಂಡ. ನಾಕ್ಷಣ. | ವಿ. ವಿ. ವಿ. ವಿ. |
| ನುಡಿದ ದಿ. ನವು ದಾಟಲು. | ವಿ. ರು. |
| ಪಡೆಯ ನೆ. ಲ್ಲವ ನಡು. ಇಣದಲಿ. ಸೋಲಿಸಿ. | ವಿ. ವಿ. ವಿ. ವಿ. |
| ಜಡಿದು ಗೋ. ವ್ರುಗಳನೆಲ್ಲ. | ವಿ. ರು. |
| ಒಡನೆ ತ. ನ್ನಯ ಪುರ. ಕ್ಕೊಡ ತಂದ. ಧೀರನ. | ವಿ. ವಿ. ವಿ. ವಿ. |
| ಒಡೆಯನ. ತೋರೆನಗೆ. | ವಿ. ರು. |

(ಕೀ. 233)

ಇದರ ಅರ್ಧವನ್ನೇ ಒಂದು ಚೌಪದಿಯಾಗಿ ಕೂಡ ಬಳಸಿದ್ದಾರೆ. 228 ನೆಯ ಕೀರ್ತನೆಯಲ್ಲಿ ಇದನ್ನು ಕಾಣಬಹುದು. ಮಾದರಿಗೆ,

| | |
|---|---|
| ಬಲೆಯ ಬೀ. ಸಿ(s)ದರು. ಸಿಕ್ಕದು. ಆ ಮೃಗ. | ವಿ. ವಿ. ವಿ. ವಿ. |
| ಜಲದೊಳು. ತಾನಿಲ್ಲದು. | ವಿ. ರು. |
| ನೆಲನ ಮೇ. ಲಿರುವುದು. ನಿಂತರೆ. ಸಾವುದು. | ವಿ. ವಿ. ವಿ. ವಿ. |
| ಕುಲದೊಳ. ಗಾಡುತಿದೆ. | ವಿ. ರು. |

(ಕೀ. 228)

2--4 ನೆಯ ಪಾದಗಳಲ್ಲಿ ಪ್ರಾಸ ತಪ್ಪಿದಾಗ ಇದೇ ದ್ವಿಪದಿಯಾಗಿ ಕೂಡ ಕಾಣಿಸಿಕೊಳ್ಳಬಹುದು. ಮಾದರಿಗೆ,

ಕಾಲನ. ದೂತರು. ಯಾವಾಗ. ಎಳೆವರೊ. ಕಾಣದು. ಎಚ್ಚರಿಕೆ.
ದೇಲೂರು. ಪುರವಾಸ. ನೆಲೆಯಾದಿ. ಕೇಶವ. ನಾಳಾಗು. ಎಚ್ಚರಿಕೆ.
(ಕೀ. 183)

ಮೊದಲ ಪಾದದ ಐದನೆಯ ಗಣದಲ್ಲಿ, ಎಂದರೆ ಚೌಪದಿಯಾಗಿ ಪರಿಗಣಿಸಿದಾಗ ಎರಡನೆಯ ಪಾದದಲ್ಲಿ ಆದಿಪ್ರಾಸ ತಪ್ಪಿರುವುದನ್ನು ಇಲ್ಲಿ ಗಮನಿಸಬಹುದು.

ಈ ದ್ವಿಪದಿಯಲ್ಲೇ ಕೊನೆಯ ಗಣದ ಸ್ಥಾನದಲ್ಲಿ ರುದ್ರಕ್ಕೆ ಬದಲು ವಿಷ್ಣುವನ್ನೂ, ಐದನೆಯ ಗಣದ ಸ್ಥಾನದಲ್ಲಿ ವಿಷ್ಣುವಿಗೆ ಬದಲು ಬ್ರಹ್ಮವನ್ನೂ, ಮೊದಲ ಪಾದದ ಅಂತ್ಯದಲ್ಲಿ ಪ್ರತ್ಯೇಕಗಣವನ್ನೂ ತರುವುದರ ಮೂಲಕ ಮತ್ತೊಂದು ಬಂಧ ಕೂಡ ರೂಪಿತವಾಗುತ್ತದೆ. ಮಾದರಿಗೆ,

ಪಾಪಿಗ. ಳಿದ್ದಲ್ಲಿ. ರೂಪುಳ್ಳ. ವಸ್ತುವ. ತೋರ. ಬಾರದು. (ಬಹು
ಕೋಪಿಗ. ಳಿದ್ದಲ್ಲಿ. ಅನುಭವ. ಗೋಷ್ಠಿಯ. ಮಾಡ. ಬಾರದು.
(ಕೀ. 33)

ವಿ. ವಿ. ವಿ. ವಿ. ಬ್ರ. ವಿ. (ಪ್ರ
ವಿ. ವಿ. ವಿ. ವಿ. ಬ್ರ. ವಿ.

ಇದೇ ವರ್ಗಕ್ಕೆ ಸೇರುವ ಮತ್ತೊಂದು ಬಂಧವೆಂದರೆ ಆರು ಗಣಗಳೂ ವಿಷ್ಣುವೇ ಆಗಿರುವಂತಹುದು. ಈ ವರ್ಗದ ಸಮಚೌಪದಿಗೆ ಉದಾಹರಣೆಯಾಗಿ ಈ ನುಡಿಯನ್ನು ಗಮನಿಸಬಹುದು :

ಗರಳಕಂ. ಧರ ಸಖ. ನನುಜನ. ಕೊಂದನ. ಗೋವಿಂದ. ಎನ್ನಿರೊ.
ಸುರಮುನಿ. ಯನುಜನ. ಪಾದವ. ಪಿಡಿದನ. ಗೋವಿಂದ. ಎನ್ನಿರೊ.
ಪರಮ ವೈಷ್ಣ. ವರ ಕೈಲಿ. ದಾನವ. ಪಿಡಿದನ. ಗೋವಿಂದ. ಎನ್ನಿರೊ.
ಉರಗನ. ಮಗಳ ಗಂ. ಡನ ಪ್ರಾಣ. ವಿತ್ತನ. ಗೋವಿಂದ. ಎನ್ನಿರೊ.
(ಕೀ. 130)

ವಿ. ವಿ. ವಿ. ವಿ. ವಿ. ವಿ.
ವಿ. ವಿ. ವಿ. ವಿ. ವಿ. ವಿ.
ರು. ವಿ. ವಿ. ವಿ. ವಿ. ವಿ.
ವಿ. ವಿ. ವಿ. ವಿ. ವಿ. ವಿ.

(ಮೂರನೆಯ ಪಾದದಲ್ಲಿ ಆದಿಯ ವಿಷ್ಣುವಿಗೆ ರುದ್ರಾದೇಶವಾಗಿದೆ.) ಕೊನೆಯ ರುದ್ರಗಣ ತರುತ್ತಿದ್ದ ಮುಕ್ತಾಯವನ್ನು ಇಲ್ಲಿ ವಿಷ್ಣುವೇ ಸರಿದೂಗಿಸಬೇಕಾಗುತ್ತದೆ. ಆದ್ದರಿಂದ ಪಾದಾಂತ್ಯದ 'ಎನ್ನಿರೊ' ಎಂಬ ಗಣವನ್ನು 'ಎನ್ನಿ(ಽ)ರೊ' ಎಂದು ಉಚ್ಚರಿಸಬೇಕಾಗುತ್ತದೆ.

ರುದ್ರಗಣವು ಕೆಲವೊಮ್ಮೆ ಎರಡು ಬ್ರಹ್ಮಗಣಗಳಾಗಿ ಒಡೆಯುವುದು ಸಹಜ. ಅದನ್ನೇ ಒಂದು ನಿಯತ ಲಕ್ಷಣವಾಗಿ ಪರಿಗಣಿಸಿದಾಗ, ವಿ. ವಿ. ವಿ. ವಿ. ಮತ್ತು ವಿ. ರು. ರಚನೆಯ ಎರಡು ಪಾದಗಳಿಂದಾದ ಅರ್ಧಸಮಚೌಪದಿಯಲ್ಲೇ ಮತ್ತೊಂದು ಪ್ರಕಾರ ವೇರ್ಪಡುತ್ತದೆ. ಇಂತಹದಕ್ಕೆ ಕೂಡ ಕನಕದಾಸರ ಕೀರ್ತನೆಗಳಲ್ಲಿ ಉದಾಹರಣೆ ಸಿಕ್ಕುತ್ತದೆ. ಮಾದರಿಗೆ,

| | |
|---|---|
| ಮುತ್ತುಗ. ಳಾ ಹಣ್ಣು. ಕಾಯಾದ. ಬಳಿಕಿನ್ನು. | ವಿ. ವಿ. ವಿ. ವಿ. |
| ಮತ್ತೊಂದು. ಚೋದ್ಯ. ಕೇಳಿ. | ವಿ. ಬ್ರ. ಬ್ರ. |
| ಚಿತ್ರದ. ಹೂವಿನ. ಹವಳ ಕಾ. ಯಾಗುವ. | ವಿ. ವಿ. ವಿ. ವಿ. |
| ಅರ್ಥವ. ತಿಳಿದು. ಪೇಳಿ. | ವಿ. ಬ್ರ. ಬ್ರ. |

(ಕೀ. 215)

ಇದರಲ್ಲೇ ಎರಡು, ನಾಲ್ಕನೆಯ ಪಾದಗಳಲ್ಲಿ ಎರಡನೆಯ ಗಣದ ಸ್ಥಾನದಲ್ಲಿ ಬ್ರಹ್ಮಕ್ಕೆ ಬದಲು ವಿಷ್ಣುವೇ ಬಂದಲ್ಲಿ ಇದೇ ಬಂಧ ಸಾಂಗತ್ಯವಾಗುತ್ತದೆ. ಅದರಲ್ಲೇ, ಎರಡು ನಾಲ್ಕನೆಯ ಪಾದಗಳ ಅಂತ್ಯದ ಬ್ರಹ್ಮಕ್ಕೆ ಬದಲಾಗಿ ವಿಷ್ಣು ಬಂದಲ್ಲಿ ಅದನ್ನು ಸೊಬಗಿನ ಸೋನೆಯ ಮಟ್ಟೆಂದು ಕರೆಯುತ್ತೇವೆ. ಇದಕ್ಕೆ ಉದಾಹರಣೆಯಾಗಿ ಈ ನುಡಿಯನ್ನು ನೋಡಬಹುದು :

| | |
|---|---|
| ವಾಜಿಯ. ಮರುಕದಿ. ತೇಜದ. ಲೇರಿಕ. | ವಿ. ವಿ. ವಿ. ವಿ. |
| ನೋಜುರಾ. ವುತನಾದೆ. ಗೋವಿಂದ. | ವಿ. ವಿ. ವಿ. |
| ವಾಜಿಯ. ಬೆನ್ನೊಳು. ರಾಜಿಪ. ಗಣದಂತೆ. | ವಿ. ವಿ. ವಿ. ವಿ. |
| ಈ ಜಗ. ದೊಳಗಿಪ್ಪೆ. ಗೋವಿಂದ. | ವಿ. ವಿ. ವಿ. |

(ಕೀ. 143)

ಇದರಲ್ಲೇ ಏಳು -- ಹದಿನಾಲ್ಕನೆಯ ಗಣಗಳ ಸ್ಥಾನದಲ್ಲಿ ವಿಷ್ಣುವಿಗೆ ಬದಲಾಗಿ ರುದ್ರ ಬಂದಲ್ಲಿ ಇದೇ ಅಂಶಷಟ್ಪದಿಯಿಂದ ರೂಪಿತವಾದ ಚೌಪದಿಯಾಗುತ್ತದೆ. ಇಂದ ಹುದನ್ನು ಕೂಡ ಕನಕದಾಸರು ಬಳಸಿದ್ದಾರೆ. ಮಾದರಿಗೆ,

| | |
|---|---|
| ಜಲಧಿಯೊ. ಳಾಮ್ನಾಯ. ತಂದಗೆ. ಮಂಗಳ. | ವಿ. ವಿ. ವಿ. ವಿ. |
| ಕುಲಗಿರಿ. ತಾಳ್ದಗೆ. ಜಯಮಂಗಳ. | ವಿ. ವಿ. ರು. |

ಕನಕದಾಸರ ಕೀರ್ತನೆಗಳ ಛಂದಸ್ಸಿಗೆ ಸಂಬಂಧಿಸಿದಂತೆ ತಿಳಿದು ಬರುವ ಅಂಶಗಳನ್ನು ಹೀಗೆ ಪಟ್ಟಿ ಮಾಡಬಹುದು :

1. ಕನಕದಾಸರ ಕೀರ್ತನೆಗಳಲ್ಲಿ ಅಂಶಬಂಧಗಳೂ ಬಳಕೆಯಾಗಿವೆ.
2. ಬಳಕೆಯಾಗಿರುವ ಅಂಶಬಂಧಗಳಲ್ಲಿ ವೈವಿಧ್ಯವಿದೆ.
3. ನಾಗವರ್ಮಾದಿ ಲಾಕ್ಷಣಿಕರು ಹೇಳದೆ ಇರುವಂತಹ ಬಂಧಗಳೂ ಅವರಲ್ಲುಂಟು.
4. ಕೇವಲ ದ್ವಿಪದಿ, ಚೌಪದಿಗಳು ಮಾತ್ರವೇ ಅಲ್ಲದೆ ಅದಕ್ಕಿಂತ ಹೆಚ್ಚಿನ ಸಂಖ್ಯೆಯ ಪಾದಗಳನ್ನುಳ್ಳ ನೂತನ ಬಂಧಗಳು ಕೂಡ ಬಳಕೆಯಾಗಿವೆ.
5. ಚೌಪದಿಗಳಲ್ಲೂ ಸಮ ಮತ್ತು ಅರ್ಧಸಮ ಚೌಪದಿಗಳು ಮಾತ್ರವೇ ಅಲ್ಲದೆ, ದ್ವಿಸಮ, ತ್ರಿಸಮ ಹೀಗೆ ಬೇರೆ ಬೇರೆ ಪ್ರಕಾರಗಳವೂ ಕಾಣಿಸುತ್ತವೆ.
6. ಅಂಶಬಂಧಗಳಲ್ಲಿ ಸಹಜವಾದ ಗಣಾದೇಶದ ಬಳಕೆ ಇಲ್ಲಿಯೂ ಸಾಕಷ್ಟಿದೆ. ವಿಷ್ಣುವಿಗೆ ಬದಲು ರುದ್ರ ಬರುವುದು ಹೆಚ್ಚು. ಬ್ರಹ್ಮಾದೇಶ ಬಹಳ ವಿರಳ.

ಈ ಅಂಶಗಳನ್ನು ಗಮನಿಸಿದಾಗ, ಕನಕದಾಸರು ಅಂಶಬಂಧಗಳನ್ನು ಎಷ್ಟರ ಮಟ್ಟಿಗೆ ಬಳಸಿದರು ಎಂಬ ವಿಷಯ ಸ್ಪಷ್ಟವಾಗುವುದಲ್ಲದೆ, ಅವನ್ನು ಶಿಷ್ಟ ಸಾಹಿತ್ಯ ರಚನೆಯಲ್ಲಿ ಎಷ್ಟರ ಮಟ್ಟಿಗೆ ಬಳಸಿಕೊಳ್ಳಬಹುದು ಎಂಬುದಕ್ಕೆ ಮಾರ್ಗದರ್ಶನ ದೊರೆಯುತ್ತದೆ.

## 2. ತಾಳಮಾತ್ರಾ ಬಂಧಗಳು :

ಚೌಪದಿ ಬಂಧಗಳ ಬಳಕೆಗೆ ಹೋಲಿಸಿದಾಗ ಕನಕದಾಸರಲ್ಲಿ ದ್ವಿಪದಿ ಬಂಧಗಳ ಬಳಕೆ ಬಹಳ ಕಡಿಮೆಯೆಂದೇ ಹೇಳಬೇಕು. ಅದರ ಬಳಕೆಯನ್ನೆಲ್ಲ ಅವರು, ಹೆಚ್ಚಾಗಿ ಪಲ್ಲವಿ ಅನುಪಲ್ಲವಿಗಳಿಗೇ ಮೀಸಲಾಗಿಟ್ಟಿರುವಂತಿದೆ; ನುಡಿರಚನೆಯಲ್ಲಿ ಅದರ ಬಳಕೆ ವಿರಳ. ಅವರು ಬಳಸಿದ ದ್ವಿಪದಿರೂಪಗಳಲ್ಲಿ ಪ್ರಮುಖವಾದುವಕ್ಕೆ ಇವನ್ನು ಉದಾಹರಣೆಗಳಾಗಿ ಗಮನಿಸಬಹುದು :

1. ಸತ್ಯ. ವಂತರ. ಸಂಗ. ವಿರಲು. ತೀರ್ಥ. ವ್ಯಾತ. ಕೆ.
ನಿತ್ಯ. ಜ್ಞಾನಿ. ಯಾದ. ಮೇಲೆ. ಚಿಂತೆ. ಯಾತ. ಕೆ. (ಕೀ. 46)
3. 3. 3. 3. 3. 3. ಮು.
3. 3. 3. 3. 3. 3. ಮು.

(ಮೊದಲ ಪಾದದಲ್ಲಿ 'ವಂತರ' ಎಂಬುದನ್ನು ಶೀಘ್ರ ಹಾಗೂ ಶಿಥಿಲ ಉಚ್ಚಾರಣೆಯ ಮೂಲಕ ತ್ರಿಮಾತ್ರಾಗಣವಾಗಿ ಹೊಂದಿಸ ಬೇಕಾಗುತ್ತದೆ.) ಇದು ಭೋಗ ಷಟ್ಪದಿಯ ಎರಡು ದೀರ್ಘ ಚರಣಗಳನ್ನು ಕೂಡಿಸುವುದರ ಮೂಲಕ ರೂಪಿಸಿದ ಬಂಧವೆಂಬುದನ್ನು ಗಮನಿಸ ಬೇಕು.

2. ಕೋಮಲ. ಕಾಯಂ. ನಾಮಸು. ದೇವಂ.
ಭಜಸಖ. ಸಿಂಪಂ. ಭೂಸುರ. ಶ್ರೇಷ್ಠಂ. (ಕೀ. 6)
4. 4. 4. 4.
4. 4. 4. 4.

ಸಂಸ್ಕೃತದ ಈ ರಚನೆಯು ಆದಿಪ್ರಾಸರಹಿತವಾದ ಮಂದಾನಿಲರಗಳೆಯ ಮಟ್ಟಿನಲ್ಲಿರುವುದನ್ನು ಗಮನಿಸಬೇಕು. ಅಂತೆಯೇ,

3. ಬಾಯಿ ನಾ. ರಿದ ಮೇಲೆ. ಏಕಾಂತ. ವೇ. (ಪ)
ತಾಯಿ ತೀ. ರಿದ ಮೇಲೆ. ತೌರಾಸೆ. ಯೇ. (ಅ) (ಕೀ. 56)
5. 5. 5. ಮು.
5. 5. 5. ಮು.

ಇದು ಕುಸುಮಷಟ್ಪದಿಯ ದೀರ್ಘಪಾದಗಳಿಂದಾದುದೆಂಬುದನ್ನು ಗಮನಿಸ ಬೇಕು.

ಮೂರು ಪಾದಗಳ ತಾಳ ಮಾತ್ರಾ ಬಂಧಗಳ ಬಳಕೆ ಕನಕದಾಸರಲ್ಲಿ ಇಲ್ಲವೆಂದೇ ಹೇಳಬಹುದು. ಇರುವುದರಲ್ಲಿ ಒಂದು, ಭೋಗಷಟ್ಪದಿಯ ಅರ್ಧಭಾಗದಿಂದಾದ ನುಡಿಯಾಗಿದೆ; ಮತ್ತೊಂದು, 3.5 ರ ಲಯದ ಮಿಶ್ರಬಂಧವಾಗಿದೆ. ಭೋಗಾರ್ಧಕ್ಕೆ ಮಾದರಿಯಾಗಿ ಈ ನುಡಿಯನ್ನು ಗಮನಿಸಬಹುದು :

ಕಾಮ. ನಯ್ಯ. ನಿಮ್ಮ. ನಾಮ.
ನೇಮ. ದಿಂದ. ಸಲಹು. ವಂತೆ.
ಪ್ರೇಮ. ಎನಗೆ. ಇತ್ತು. ಸಲಹೊ. ಸ್ವಾಮಿ. ವಾಮ. ನ.
3. 3. 3. 3.
3. 3. 3. 3.
3. 3. 3. 3. 3. 3. ಮು.

3.5 ರ ಲಯದ ಮಿಶ್ರಬಂಧಕ್ಕೆ ಉದಾಹರಣೆಯಾಗಿ ಇದನ್ನು ನೋಡಬಹುದು :

ಏನು. ಪೇಳಲೇ. ನು. ಎನಗೆ. ಹೀನ. ಬಿಡದು ಮು. ನ್ನ.
ಶ್ವಾನ. ಗಿಂತ. ಬಲು. ಮಾನ. ಗೆಟ್ಟ ನಾ.
ದೀನ. ಗಿ ಮನೆ. ಮನೆಗಳ. ತಿರುಗಿ. (ಕೀ. 155)

3. 5. ಮು. ಪ್ರ. 3. 5. ಮು.
3. 5. 3. 5.
3. 5. 4. 4.

3. 5. ಮು. ರಚನೆಯ ಎರಡು ಘಟಕಗಳನ್ನು ಪ್ರತ್ಯೇಕಗಣವೊಂದು ಬೆಸೆದಿದೆ. ಇದು ಮೊದಲ ಪಾದದ ರಚನೆ. ಉಳಿದೆರಡು ಪಾದಗಳು ಸಮಾನವಾದವು; ಹದಿನಾರು ಮಾತ್ರೆಗಳವು. ಕೊನೆಯ ಪಾದದ ಕೊನೆಯ ಎರಡು ಗಣಗಳ ಸ್ಥಾನದಲ್ಲಿ 3. 5. ಕ್ಕೆ ಬದಲು 4. 4. ಬರುವುದರ ಮೂಲಕ ಗಣಪರಿವೃತ್ತಿ ಬಂದಿದೆ. ಕೊನೆಯ ಗಣವನ್ನು ದೀರ್ಘೀಕರಣಕ್ಕೆ ಒಳಗು ಮಾಡಿ ನಾಲ್ಕು ಮಾತ್ರೆಗಳ ಮೌಲ್ಯಕ್ಕೆ ಹಿಗ್ಗಿಸಬೇಕು. ಮೊದಲ ಪಾದದ ಒಳಗೆ ಬರುವ ಮುಡಿ, ಯತಿ, ಪ್ರತ್ಯೇಕ - ಗಣ ಇವು ಆ ಪಾದಕ್ಕೆ ಚಿತ್ರಗತಿಯನ್ನು ಒದಗಿಸಿವೆ.

ತಾಳಮಾತ್ರಾಲಯಕ್ಕೆ ಒಗ್ಗುವ ಹಾಡುಗಳಲ್ಲಿ ಹೆಚ್ಚಿನವು ವೀರಚೌಪದಿ ವರ್ಗಕ್ಕೆ ಸೇರುತ್ತವೆ. ಒಂದು ಮತ್ತು ಮೂರನೆಯ ಪಾದಗಳಲ್ಲಿ ಐದು ಮಾತ್ರೆಯ ನಾಲ್ಕು ಗಣಗಳೂ, ಎರಡು ಮತ್ತು ನಾಲ್ಕನೆಯ ಪಾದಗಳಲ್ಲಿ ಐದು ಮಾತ್ರೆಯ ಮೂರು ಗಣಗಳು ಮತ್ತು ಕೊನೆಗೊಂದು ಗುರು ಅಥವಾ ಪದ್ಮಗಣವೂ ಬರುವುದು ಈ ವರ್ಗದ ಸಾಮಾನ್ಯ ಲಕ್ಷಣ. ಈ ಲಕ್ಷಣಕ್ಕೆ ಒಗ್ಗುವಂತಹ ಈ ಕೆಲವು ಉದಹರಣೆಗಳನ್ನು ಗಮನಿಸಬಹುದು:

1. ಪಥ್ಯ ಸೇ. ರದ ಮೇಲೆ. ನಿತ್ಯಸುಖ. ವೆನಬಹುದೆ.
ಸತ್ವತ. ಗ್ಗಿದ ಮೇಲೆ. ಸಾಮರ್ಥ್ಯ. ವೆ.
ಪೃಥ್ವಿಯೊಳು. ಕಾಗಿನೆಲೆ. ಯಾದಿಕೇ. ಶವ ನಿನ್ನ.
ಭಕ್ತಿ ಇ. ಲ್ಲ(s)ದವಗೆ. ಮುಕ್ತಿಯುಂ. ಟೆ. (ಕೀ. 56)
5. 5. 5. 5.
5. 5. 5. ಮು.
5. 5. 5. 5.
5. 5. 5. ಮು.

2. ಧರೆಗೆ ಧ. ರ್ಮಜನಂತೆ. ಕಂಕ ಭ. ಟ್ಟನು ಅಂತೆ.
ಶೂರ ಭೀ. ಮನು ಬಾಣ. ಸಿಗನಾದ. ನಂತೆ.
ವೀರ ಫಲು. ಗುಣನಂತೆ. ಕೈಯೊಳಗೆ. ಬಳೆಯಂತೆ.
ಕಿರಿನಕುಲ. ಸಹದೇವ. ತುರುಗಾಯ್ದ. ರಂತೆ. (ಕೀ. 49)
5. 5. 5. 5.
5. 5. 5. ಪ.
5. 5. 5. 5.
5. 5. 5. ಪ.

3. ಪೌರತ್ರ. ಯವಗೆಲ್ಲ. ಸಮಯದಲಿ. ತಪಮಾಡಿ.
ನಾರಾಯ. ಣಾಸ್ತ್ರವನು. ಪಡೆದನೀ. ಶ.
ಗೌರೀಮ. ನೋಹರನ. ಘನತರಾ. ರ್ಚನೆಗೈದು.
ಚಾರುತರ. ಚಕ್ರವನು. ಪಡೆದನಾ. ಶೌರಿ. (ಕೀ. 146)

5. 5. 5. 5.
5. 5. 5. ಮು.
5. 5. 5. 5.
5. 5. 5.ಪ.

ಎರಡು ಮತ್ತು ನಾಲ್ಕನೆಯ ಪಾದಗಳ ಅಂತ್ಯದಲ್ಲಿ, ಮೊದಲನೆಯದರಲ್ಲಿ ಮುಡಿಯೇ ಬಂದಿದ್ದರೆ, ಎರಡನೆಯದರಲ್ಲಿ ಪದ್ಮಗಣವೇ ಬಂದಿದೆ' ಮೂರನೆಯದ ರಲ್ಲಿ ಕ್ರಮವಾಗಿ ಮುಡಿ, ಪದ್ಮಗಣಗಳು ಬಂದಿವೆ. ಎರಡೂ ಕಡೆ ಮುಡಿ ಬಂದಾಗ ಇದು ಕುಸುಮಷಟ್ಪದಿಯಿಂದ ರೂಪಿಸಿಕೊಂಡ ಚೌಪದಿಯಾಗುತ್ತದೆ. ಹೀಗೆಯೇ ಶರಷಟ್ಪದಿಯಿಂದ ರೂಪಿತವಾದವೂ ಉಂಟು. ಅಂತಹವನ್ನು 87, 197 ಮತ್ತು 234 ನೆಯ ಕೀರ್ತನೆಗಳಲ್ಲಿ ಕಾಣಬಹುದು. ಉದಾಹರಣೆಗೆ,

ರಥವನ. ಡರಿ. ಸುರ. ಪಥದಲಿ. ತಿರುಗುವ.
ಸುತನಿಗೆ. ಶಾಪವ. ನಿತ್ತವ. ನ.
ಖತಿಯನು. ತಡೆದನ. ಸತಿಯಜ. ನನಿ ಸುತ.
ಸತಿಯರ. ನಾಳಿದ. ಚತುರನಿ. ಗೆ. (ಕೀ. 234)

4. 4. 4. 4.
4. 4. 4. ಮು.
4. 4. 4. 4.
4. 4. 4. ಮು.

ಮೊದಲ ಪಾದದ ಮೊದಲೆರಡು ಗಣಗಳಲ್ಲೂ, ಮೂರನೆಯ ಪಾದದ ಕೊನೆಯ ಎರಡು ಗಣಗಳಲ್ಲೂ ಗಣಪರಿವೃತ್ತಿ ತಂದು, ಅವನ್ನು ಕ್ರಮವಾಗಿ, "ರಥವ. ನಡರಿ. ಸುರ." (3.3.2.) ಮತ್ತು "ಸತಿಯ. ಜನನಿ. ಸುತ" (3.3.2.) ಎಂದು ಓದಿದಾಗ, ಗತಿಯು ಹೆಚ್ಚು ಸುಗಮವಾಗುತ್ತದೆ.

ಇದೇ ರೀತಿ ಒಂದು ಕೀರ್ತನೆಯಲ್ಲಿ ತ್ರಿಪುಡೆಯನ್ನು ಕೂಡ ಗುರುತಿಸಬಹುದು. ಮಾದರಿಗೆ,

ಸುದತಿ. ಯೊಬ್ಬಳು. ದಧಿಯ. ಮಥಿಸುತ.
ಒದಗಿ. ಬೆಣ್ಣೆಯ. ತೆಗೆಯ. ಲು.
ಮದನ. ಕದನಕೆ. ಕೆಡಹಿ. ಮಾನಿನಿ.
ಒದರಿ. ದರು ನೀ. ಬಿಡೆಯ. ಲ. (ಕೀ. 147)

3. 4. 3. 4.
3. 4. 3. ಮು.
3. 4. 3. 4.
3. 4. 3. ಮು.

ಅಂತೆಯೇ, ವಾರ್ಧಕಷಟ್ಪದಿಯ ದೀರ್ಘಚರಣದಿಂದ ರೂಪಿತವಾದ ಚಿಕ್ಕ ಚೌಪದಿಯನ್ನು 92 ನೆಯ ಕೀರ್ತನೆಯಲ್ಲಿ ಗುರುತಿಸಬಹುದು. ಮಾದರಿಗೆ,

ಅರಿಗಳು(s). ದಂಡೆತ್ತಿ. ಬರಲು ನಾ. ನವರೊಡನೆ.
ಪರಿ ಪರೀ. ಹೋರುತಿರ. ಲು.
ದುರುಳರೆ. ನ್ನನು ಜೈಸಿ. ಹರಿದಟ್ಟಿ. ಬಂದೆನ್ನ.
ಧರೆಗುರುಳಿ. ಸಿದರೊ ಹರಿ. ಯೆ. (ಕೀ. 92)

5. 5. 5. 5.
5. 5. ಮು.
5. 5. 5. 5.
5. 5. ಮು.

ಇದರಲ್ಲೇ ಮುಡಿಗೆ ಬದಲು ಪದ್ಮಗಣ ತಂದಾಗ ಮತ್ತೊಂದು ರೂಪ ಸಿದ್ಧವಾಗುತ್ತದೆ. ಅದಕ್ಕೆ ಈ ಉದಾಹರಣೆಯನ್ನು ನೋಡಬಹುದು :

ನುಸುಳಿಸುವ. ಚಾಂಡಾಲ. ಗುಣವನೆಣಿ. ಸಿದೆ ಕಾಮ.
ವಶವಾಗಿ. ನಾನಿದ್ದೆ. ವರದಾ.
ಉಸಿರಲೆ. ನ್ನಳವಲ್ಲ. ದೆಸನಿತ್ತು. ಸಲಹೆನ್ನ.
ಬಿಸರುಹಾ. ಕ್ಷನೆ ಕಂಚಿ. ವರದಾ. (ಕೀ. 153)

5. 5. 5. 5.
5. 5. ಪ.
5. 5. 5. 5.
5. 5. ಪ.

ಇಂತಹ ಚೌಪದಿಯ ಅರ್ಧಭಾಗವನ್ನು ವೀರಚೌಪದಿಯ ಅರ್ಧಭಾಗದೊಡನೆ ಕಸಿಮಾಡುವುದರಿಂದ ಮಿಶ್ರರೀತಿಯ ಮತ್ತೊಂದು ತರಹದ ಚೌಪದಿ ಸಿದ್ಧವಾಗುತ್ತದೆ. ಅಂತಹದೂ ಕನಕದಾಸರಲ್ಲುಂಟು. ಮಾದರಿಗೆ,

ಎಳೆಗೆರೆಯ. ದಾಟಿ ಯ. ವ್ವನದ ಊ. ರಿಗೆ ಬಂದು.
ಥಳಥಳಿಪ. ಹಸ್ತಾದ್ರಿ. ನೆಳಲ ಸೇ. ರಿ.
ಅಳಲು ಸುತ. ಬೆಳೆದು ದಾ. ರಿದ್ಧ ಪೇ. ಟೆಗೆ ಬಂದು.
ಹಳೆಯ ಬೀ. ಡಿಗೆ ಪಯಣ. ವೇ. ಆತ್ಮ (ಕೀ. 199)

5. 5. 5. 5.
5. 5. 5. ಮು.
5. 5. 5. 5.
5. 5. ಮು. +ಕೊಂಡಿಗಣ.

ಇದರಲ್ಲಿ ಪೂರ್ವಾರ್ಧವು ವೀರಚೌಪದಿಯ ಅರ್ಧಭಾಗವಾಗಿದ್ದು ಉತ್ತರಾರ್ಧವು ವಾರ್ಧಕ ಷಟ್ಪದಿಯ ದೀರ್ಘಪಾದದಿಂದಾಗಿರುವುದನ್ನೂ, ಕೊನೆಗೆ, ಪಲ್ಲವಿ ಯೊಡನೆ ಸಂಬಂಧ ಕಲ್ಪಿಸುವ ಕೊಂಡಿಗಣವೊಂದು ಬಂದಿರುವುದನ್ನೂ ಇಲ್ಲಿ ಗಮನಿಸಬೇಕು.

ರಗಳೆಯ ಪಾದಗಳು ಮತ್ತು ಷಟ್ಪದಿಗಳ ದೀರ್ಘಪಾದಗಳು ಇವುಗಳ ಬಳಕೆ ಯಿಂದ ಸಮಚೌಪದಿ ಪ್ರಕಾರವೊಂದನ್ನು ನಿರ್ಮಿಸುವುದು ಸಾಧ್ಯವಿದೆ. ಅಂತಹ ವರ್ಗಕ್ಕೆ ಸೇರಬಲ್ಲ ಕೆಲವು ಬಂಧಗಳನ್ನು ಕೂಡ ಕನಕದಾಸರು ಬಳಸಿದ್ದಾರೆ, ಮಾದರಿಗೆ ಇವನ್ನು ನೋಡಬಹುದು :

1. ಸಿರಿಯ. ಮೆಚ್ಚಿ. ಮೆರೆಯ. ದಿರು(s). 3. 3. 3. 3.
ಬರಿದೆ. ಹೊತ್ತ. ಕಳೆಯ. ದಿರು(s). 3. 3. 3. 3.
ಪರರ. ನಿಂದೆ. ಯನ್ನು. ಮಾಡಿ. 3. 3. 3. 3.
ನರಕಿ. ಯಾಗ. ಬೇಡ. ಮನವೆ. 3. 3. 3. 3.
(ಕೀ. 32).

ಉತ್ಸಾಹರಗಳೆಯ ಪಾದಗಳಿಂದ ಈ ಬಂಧ ರೂಪುಗೊಂಡಿರುವುದನ್ನು ಗಮನಿ ಸಬೇಕು. ಉಳಿದ ರಗಳೆಗಳನ್ನು ಇಂತಹ ರಚನೆಗಳಿಗಾಗಿ ಕನಕದಾಸರು ಬಳಸಿ ಕೊಂಡಿ ರುವಂತೆ ಕಾಣುವುದಿಲ್ಲ.

2. ವನಜಾಕ್ಷ. ಮಾಧವ(s). ವಸುದೇವ. ತನಯ. 5. 5. 5. ಪ.
ಸನಕಾದಿ. ಮುನಿವಂದ್ಯ. ಸಾಧುಜನ. ಪ್ರಿಯ. 5. 5. 5. ಪ.
ಇನಕೋಟಿ. ಶತ ತೇಜ. ಮುನಿಕಲ್ಪ. ಭೋಜ. 5. 5. 5. ಪ.
ಕನಕಾದ್ರಿ. ನಿಲಯ ವೆಂ. ಕಟರಾಯ. ಜೀಯ. 5. 5. 5. ಪ.

ಕುಸುಮ ಷಟ್ಪದಿಯ ದೀರ್ಘ ಪಾದಗಳಿಂದ ಈ ನುಡಿ ರೂಪಿತವಾಗಿದೆ. ಇದನ್ನು ಮಾನೌಮಿ ಚೌಪದದ ಮಟ್ಟು ಅಥವಾ ಮಾತ್ರಾಲಯದ ಛಂದೋವತಂಸ ಎಂದು ಕರೆ ಯಲಾಗುತ್ತದೆ.

3. ಕಾಲ. ಕರ್ಮ. ಶೀಲ. ನೇಮ. ನಿನ್ನ. ದೇನೆ. ಲೊ.
ಜಾಲ. ವಿದ್ಯೆ. ಬಯಲ. ಮಾಯೆ. ನಿನ್ನ. ದೇನೆ. ಲೊ.
ಕೀಲು. ಜಡಿದ. ತೊಗಲ. ಗೊಂಬೆ. ನಿನ್ನ. ದೇನೆ. ಲೊ.
ಲೋಲ. ಆದಿ. ಕೇಶ. ವನ್ನ. ಭಕ್ತ. ನಾಗೆ. ಲೊ.

3. 3. 3. 3. 3. 3. ಮು.
3. 3. 3. 3. 3. 3. ಮು.
3. 3. 3. 3. 3. 3. ಮು.
3. 3. 3. 3. 3. 3. ಮು.

ಇದು ಭೋಗ ಷಟ್ಪದಿಯ ದೀರ್ಘಪಾದಗಳಿಂದ ರೂಪಿತವಾದ ಸಮಚೌಪದಿಯಾಗಿದೆ. ಉಳಿದ ಷಟ್ಪದಿಗಳನ್ನು ಕನಕದಾಸರು ಈ ಉದ್ದೇಶಕ್ಕೆ ಬಳಸಿಕೊಂಡಂತೆ ಕಾಣುವುದಿಲ್ಲ. ಆದರೆ ಇದೇ ವರ್ಗಕ್ಕೆ ಸೇರಿಸಬಹುದಾದಂತಹ 3.5 ರ ಲಯದ ಸಮ ಚೌಪದಿಯೊಂದನ್ನು ಮಾತ್ರ ಬಳಸಿದ್ದಾರೆ. ಮಾದರಿಗೆ ಇದನ್ನು ನೋಡಬಹುದು :

ಹೊತ್ತ. ರೆದ್ದು ಮುಖ. ತೊಳೆದು. ಮನೆ ಮನೆ(s). ಪೋತರ. ಕುಂತಿ. ದ್ದೆ.
ವಿತ್ತ. ಮದದಿ ಪರ. ಸ್ತ್ರೀಯರ. ಕಂಡು(s). ಆರ್ತಿ. ಬಡುತಲಿ. ದ್ದೆ.
ಲೆತ್ತ. ಪಗಡೆ ಚದು. ರಂಗ. ಆಟದೊಳೆ. ಹೊತ್ತು. ಕಳಿಯುತಿ. ದ್ದೆ.
ನಿತ್ಯ ನಿತ್ಯ ಈ. ಪರಿ ಆ ಯುಷ್ಯವ. ವ್ಯರ್ಥ. ಕಳೆಯು ತಿ. ದ್ದೆ.

3. 5. 3. 5. 4. 4. ಮು.
3. 5. 4. 4. 3. 5. ಮು.
3. 5. 3. 5. 3. 5. ಮು.
3. 5. 4. 4. 3. 5. ಮು.

ಮೊದಲ ಪಾದದ 5--6 ನೆಯ ಗಣಗಳಲ್ಲಿ, ಎರಡನೆಯ ಮತ್ತು ನಾಲ್ಕನೆಯ ಪಾದಗಳ 3--4 ನೆಯ ಗಣಗಳಲ್ಲಿ, ಗಣಪರಿವೃತ್ತಿ ಬಂದಿದೆ.

ನಾಲ್ಕು ಪಾದಗಳೂ ಒಂದೇ ಸಮನಾಗಿಲ್ಲದಂತಹ ಚೌಪದಿಯೊಂದನ್ನು ಕೂಡ ಕನಕದಾಸರಲ್ಲಿ ಗುರುತಿಸಬಹುದು. ಅದಕ್ಕೆ ಈ ನುಡಿ ಉದಾಹರಣೆಯಾಗಿದೆ :

ತತ್ತ್ವ. ಭಾಂಡವ. ತೊಳೆಯ. ಬೇಕ.ಣ್ಣ. ಸ. ತ್ಯಾತ್ಮ ನಾಗಿ(s).
ಅರ್ತಿ. ಅಕ್ಕಿಯ. ಮಥಿಸ. ಬೇಕ. ಣ್ಣ.
ಕತ್ತ. ರಿ(s)ಮನ. ವೆಂಬ. ಹೊಟ್ಟನು. ಎತ್ತಿ. ಒಲೆಗೆ(s). ಹಾಗಿ.
ಇನ್ನು(s).

ಹೊತ್ತಿ. ಕೊಂಡಿಹ. ಮಮತೆ. ಯನ್ನು(s). ಎತ್ತಿ. ಹೆಸರ(s). ಹಿಂಗಿ.
ಸುತಲಿ(s).

(ಕೀ. 151)

3. 4. 3. 4. ಮು. (ಪ್ರ) 3. 4.
3. 4. 3. 4. ಮು.
3. 4. 3. 4. 3. 4. 3. 4.
3. 4. 3. 4. 3. 4. 3. 4.

ಮೊದಲ ಪಾದದಲ್ಲಿ ಸೂಚಿತವಾಗಿರುವ ಪ್ರತ್ಯೇಕಗಣವು ಆ ಪಾದದ ಪೂರ್ವೋತ್ತರ ಭಾಗಗಳ ನಡುವಿನ ಕೊಂಡಿಯಾಗಿ ವರ್ತಿಸುತ್ತದೆ. ಆದರೆ ಮೊದಲೆರಡು ಪಾದಗಳನ್ನೂ ಒಟ್ಟಾರೆಯಾಗಿ ಪರಿಗಣಿಸಿದಾಗ, ಪ್ರತ್ಯೇಕಗಣ ಮತ್ತು ಅದರ ಮುಂದಿನ ಎರಡು ಗಣಗಳು -- ಇಷ್ಟೂ ಒಟ್ಟಾಗಿ ಸೇರಿ, ಮೊದಲನೆಯ ಮತ್ತು ಎರಡನೆಯ ಪಾದಗಳ ನಡುವಣ ಕೊಂಡಿಯಾಗಿ ವರ್ತಿಸುವುದು ಅನುಭವಕ್ಕೆ ಬರುತ್ತದೆ.

ಉತ್ಸಾಹ ಲಯದ ಪಂಚಪದಿಯೊಂದನ್ನು ಕೂಡ ಕನಕದಾಸರಲ್ಲಿ ಗುರುತಿಸಬಹುದು. ಮಾದರಿಗೆ,

ಬರೆದ. ಬರೆಹ. ತೊಡೆದ. ಮೇಲೆ. ಕರೆದ. ರಾಗ. ಹೋಗ. ಬೇಕು.
ನೆರೆದು. ಸುತ್ತ. ಮುತ್ತ. ಕುಳಿತ. ಪರಮ. ಬಂಧು. ವರ್ಗ. ವೆಲ್ಲ.
ಇರಿಸ. ದೇಡಿ. ಸುಡು ಸು. ಡೆಂಬ. ರು. ಸುಟ್ಟ, ಬಳಿಕ.
ಭರದಿ. ಬಂದು. ಮನೆಯೊ. ಳೆಂಬ. ರು. ಪಾಪಿ. ಸತ್ತ.
ತರುಣಿ. ಕೆಟ್ಟ. ಳೆಂದು. ಕೊಂಬ. ರೈ. -- ಆತ್ಮ

(ಕೀ. 198)

3. 3. 3. 3. 3. 3. 3. 3.
3. 3. 3. 3. 3. 3. 3. 3.
3. 3. 3. 3. ಮು. 3. 3.
3. 3. 3. 3. ಮು. 3. 3.
3. 3. 3. 3. ಮು. —— +ಕೊಂಡಿಗಣ.

ಮೊದಲೆರಡು ಪಾದಗಳಲ್ಲಿ ನೇರವಾಗಿ ಹರಿದು ಬಂದ ಗತಿಯು, ಮೂರು, ನಾಲ್ಕನೆಯ ಪಾದಗಳಲ್ಲಿ, ಮುಡಿಯ ಮುಂದಣ ಪ್ರತ್ಯೇಕಗಣಗಳ ಫಲವಾಗಿ, ಸುತ್ತಿಕೊಂಡು ಸುತ್ತಿಕೊಂಡು ಮುಂದೆ ಹೋಗಿ ಕೊನೆಯ ಪಾದದಲ್ಲಿ ಮುಕ್ತಾಯ ಹೊಂದುತ್ತದೆ. ಇದರಿಂದ ಬಂಧಕ್ಕೆ ವಿಶಿಷ್ಟ ರೀತಿಯ ನರ್ತನಗತಿ ಪ್ರಾಪ್ತಿಸಿದೆ.

ಇದರಲ್ಲೇ, ಕೊನೆಯ ಪಾದದ ಅಂತ್ಯದಲ್ಲಿ ಕೂಡ, ಅನಾಗತ ಸಹಿತವಾದ ತ್ರಿಮಾತ್ರಾಗಣಗಳೆರಡನ್ನು ತರುವ ಪ್ರವೃತ್ತಿಯನ್ನು 47 ನೆಯ ಕೀರ್ತನೆಯಲ್ಲಿ ಕಾಣುತ್ತೇವೆ :

ಹೊತ್ತ. ರೆದ್ದು. ಪೋಗಿ. ಪರರ. ಚಿತ್ತ. ವೃತ್ತಿ. ಯನ್ನೆ. ಅರಿತು.
ನಿತ್ಯ. ದಲ್ಲಿ. ಹಲವು. ಕೆಲಸ. ಭೃತ್ಯ. ನಂತೆ. ಮಾಡಿ. ರಿಕ್ತ.
ಹಸ್ತ. ದಿಂದ. ಮನೆಗೆ. ಸೇರು. ವೆ. ಆಸೆ. ಗಾಗಿ.
ಮತ್ತೆ. ಕಂಡ. ಕಡೆಗೆ. ತೊಲಗು. ವೆ. ಬಂದು. ಅಪರ.
ರಾತ್ರೆ. ಯಲ್ಲಿ. ತಿಂದು. ಒರಗು. ವೆ. ರಂಗಯ್ಯ. ರಂಗ.

3. 3. 3. 3. 3. 3. 3. 3.
3. 3. 3. 3. 3; 3. 3. 3.
3. 3. 3. 3. ಮು. 3. 3.
3. 3. 3. 3. ಮು. 3. 3.
3. 3. 3. 3. ಮು. ಅ)3. 3.

ಈ ಅಧಿಕಭಾಗದ ಸೇರ್ಪಡೆಯಿಂದಾಗಿ ಭಾವವನ್ನು ಮತ್ತಷ್ಟು ಮುಂದಕ್ಕೆ ಎಳೆದಂತಾಗುವುದಲ್ಲದೆ ಪಲ್ಲವಿಯ ನಿರೀಕ್ಷಣೆಯೊಂದಿಗೆ ನುಡಿಯನ್ನು ಮುಗಿಸಿದಂತಾಗಿದೆ.

ಷಟ್ಪದಿಗಳಿಗೆ ಸಂಬಂಧಿಸಿದಂತೆ ಕನಕದಾಸರು ಭೋಗ ಮತ್ತು ವಾರ್ಧಕಷಟ್ಪದಿಗಳನ್ನು ಮಾತ್ರ ಬಳಸಿದ್ದಾರೆ. ಮಾದರಿಗೆ ಇವನ್ನು ನೋಡಬಹುದು :

1. ಹೊನ್ನು. ಹೆಣ್ಣು. ಮಣ್ಣು. ಮೂರು.
ತನ್ನ. ಲಿದ್ದು. ಉಣ್ಣ. ಲಿಲ್ಲ.
ಅಣ್ಣ. ತಮ್ಮ. ತಾಯಿ. ತಂದೆ. ಬಯಸ. ಲಾಗ. ದೊ.
ಅನ್ನ. ವಸ್ತ್ರ. ಭೋಗ. ಕಾಗಿ.
ತನ್ನ. ಸುಖವ. ಕಾಣ. ಲಿಲ್ಲ.
ಮಣ್ಣು. ಪಾಲು. ಆದ. ಮೇಲೆ. ಯಾರಿ. ಗಾಹು. ದೊ. (ಕೀ. 58).

3. 3. 3. 3.
3. 3. 3. 3.
3. 3. 3. 3. 3. 3. ಮು.
3. 3. 3. 3.
3. 3. 3. 3.
3. 3. 3. 3. 3. 3. ಮು.

2. ಮಂಗಳಂ. ಮುರಹರಗೆ. ಮಂಗಳಂ. ನರಹರಿಗೆ.
ಮಂಗಳಂ ಸಿರಿವರಗೆ. ಮಂಗಳಂ. ಸಿರಿಧರಗೆ.

ಮಂಗಳಂ. ಕರಿವರದ. ಕಮಲಾಯ. ತಾರ್ಕ್ಷನಿಗೆ. ಮಂಗಳಂ. ಕರುಣನಿಧಿ. ಗೆ.
ಮಂಗಳಂ. ಪರಮಾತ್ಮ ಪರಿಪೂರ್ಣ. ಪಾವನಗೆ.
ಮಂಗಳಂ. ತರುಣಿಯಭಿ. ಮಾನವನು. ಕಾಯ್ದವಗೆ.
ಮಂಗಳಂ. ಸಿರಿಕಾಗಿ. ನೆಲೆಯಾದಿ. ಕೇಶವಗೆ.
ಮಂಗಳಂ. ಗಿರಿವಾಸ. ಗೆ. (ಕೀ. 212)

5. 5. 5. 5.
5. 5. 5. 5.
5. 5. 5. 5. 5. 5. ಮು.
5. 5. 5. 5.
5. 5. 5. 5.
5. 5. 5. 5. 5. 5. ಮು.

ಸಾಂಗತ್ಯವನ್ನು 'ಮೋಹನತರಂಗಿಣಿ'ಗೇ ಮೀಸಲಾಗಿಟ್ಟು ಕೀರ್ತನೆಗಳಿಂದ ಹೊರಗಿರಿಸಿರುವಂತೆಯೇ, ಭಾಮಿನೀಷಟ್ಪದಿಯನ್ನು ಕೂಡ 'ರಾಮಧಾನ್ಯ ಚರಿತೆ', 'ಹರಿಭಕ್ತಿಸಾರ' ಮತ್ತು 'ನಳಚರಿತ್ರೆ'ಗಳಿಗೇ ಮೀಸಲಾಗಿಟ್ಟು ಕೀರ್ತನೆಗಳಿಂದ ಹೊರಗಿಟ್ಟಿರುವುದು ಕುತೂಹಲಕರವಾದ ಅಂಶವಾಗಿದೆ. ಅಂತೆಯೇ ಕನಕದಾಸರ ಕೃತಿಗಳಲ್ಲಿ ಕಂಡು ಬರುವ ಛಂದಸ್ಸಿನ ಈ ಮೀಸಲು ತನ ಗಮನಾರ್ಹವಾದುದೂ ಆಗಿದೆ.

ಮಿಶ್ರರೀತಿಯ ನೂತನ ಷಟ್ಪದಿ ಬಂಧವೊಂದನ್ನು ಕನಕದಾಸರ 119 ನೆಯ ಕೀರ್ತನೆಯಲ್ಲಿ ಗುರುತಿಸಬಹುದು. ಮಾದರಿಗೆ,

ಹೊತ್ತ. ರೆದ್ದು. ಮನೆಗೆ. ಬಂದ. ನೆ. ಯ)ಶೋದೆ. ಕೇಳೆ.
ಎತ್ತಿ. ಕೊಂಡು. ಮುತ್ತ. ಕೊಟ್ಟನೆ.
ಎತ್ತಿ. ಕೊಂಡು. ಮುತ್ತ. ಕೊಟ್ಟರೆ.
ಮುತ್ತಿ. ನ್ಹಾರವ. ಕೊರಳಿ. ಗ್ಹಾಕಿ.
ಚಿತ್ತ. ಜನ(s).ಕೇಳಿ. ಯೊಳು(s).
ಬತ್ತಲೆನಿಂ. ದೆತ್ತು. ಎಂದ. ನೆ.

3. 3. 3. 3. ಮು. ಅ)3. 3.
3. 3. 3. 3. ಮು.
3. 3. 3. 3.
3. 3. 3. 3.
3. 3. 3. 3.
3. 3. 3. 3. ಮು.

ಇಲ್ಲಿ ಮೂರನೆಯ ಪಾದದ ಕೊನೆಯ ಗಣವನ್ನೂ ನಾಲ್ಕನೆಯ ಪಾದದ ಎರಡನೆಯ ಗಣವನ್ನೂ ಹ್ರಸ್ವೀಕರಣಕ್ಕೊಳಗು ಮಾಡಿ ಮೂರು ಮಾತ್ರೆಯವಾಗಿ ಪರಿಗಣಿಸಬೇಕು. ಅಂತೆಯೇ, ಕೊನೆಯ ಪಾದದ ಮೊದಲೆರಡು ಗಣಗಳಲ್ಲಿ ಗಣಪರಿವೃತ್ತಿಯನ್ನು ಪರಿಗಣಿಸಬೇಕು. ಎರಡನೆಯ ಪಾದ ಮುಗಿಯುವ ಹೊತ್ತಿಗೆ ನುಡಿಯ ಅರ್ಧಭಾಗ ಮುಗಿದಂತೆ ಅನುಭವವಾಗುತ್ತದೆ. ಆದರೆ ಉಳಿದ ಭಾಗವನ್ನು ಅಷ್ಟು ಬೇಗ ಮುಗಿಸದೆ ಮೂರು ಪಾದಗಳವರೆಗೆ ಹರಿಸಿ ನಾಲ್ಕನೆಯ ಪಾದದಲ್ಲಿ ಮುಗಿಸಲಾಗುತ್ತದೆ. ಇದರಿಂದಾಗಿ 2--6 ನೆಯ ಪಾದಗಳು ಇಲ್ಲಿ ನುಡಿಯ ಮೊದಲನೆಯ ಹಾಗೂ ಕೊನೆಯ ನಿಲುಗಡೆಗಳನ್ನು ಸೂಚಿಸುವುವಾಗಿವೆ. ಹೀಗೆ ಕೊನೆಯ ಪಾದವು ಎರಡನೆಯ ಪಾದಕ್ಕೆ ಸದೃಶವಾದುದಾಗಿರುವುದರಿಂದ ಇಡೀ ಬಂಧಕ್ಕೆ ಪರಿಪೂರ್ಣತೆಯ ಬಿಗಿ ದೊರೆತಿದೆ.

ಇನ್ನು ಸಪ್ತಪದಿಗಳು. ಮತ್ತು ಅಷ್ಟಪದಿಗಳು. ಸಪ್ತಪದಿಗಳ ಬಳಕೆಯೇನೋ ಕನಕದಾಸರಲ್ಲಿ ಕಂಡುಬರುವುದಿಲ್ಲ. ಆದರೆ ಅಷ್ಟಪದಿಗಳ ಕೆಲವು ಪ್ರಕಾರಗಳನ್ನಂತೂ ಗುರುತಿಸಬಹುದು. ಇವಕ್ಕೆ ಮಾದರಿಯಾಗಿ ಈ ನುಡಿಗಳನ್ನು ನೋಡಬಹುದು :

1. ಭದ್ರ. ಕಂಬ. ಒಂದ. ರೊಳಗೆ. ಉದ್ದ. ವಾದ. ಕೊನೆಯ. ಮೇಲೆ.
ಸಿದ್ಧಿ. ಯಾದ. ಚಿಗುರು. ಹೂವು. ಕಾಯಿ. ಹಣ್ಣ. ನು.
ಮೆದ್ದು. ಹೋದ. ಪಕ್ಷಿ. ಬಂದು. ಪದ್ದು. ಹಿಡಿದು. ಉದ್ದ. ಕೆತ್ತಿ.
ಬುದ್ಧಿ. ಹೀನ. ನಾಗಿ. ಬೆಳೆದು. ಧರೆಗೆ. ಬಿದ್ದು. ದ.
ಕದ್ದು. ಮ. ತ್ತೊಬ್ಬ. ತರು. ತ್ತಿದ್ದ. ದಾರಿ. ಯನ್ನು. ಕಟ್ಟಿ
ಒದ್ದು. ಹಿಡಿದು. ಗುದ್ದಿ. ನೂಕಿ. ಸೆಳೆದು. ಕೊಂಡು. ದ.
ಸಾಧ್ಯ. ವಾಯಿ. ತೆಂದು. ತನ್ನ. ಮನಗೆ. ಬಂದು. ಸತಿಗೆ. ಕೊಡಲು.
ಶುದ್ಧ. ವಾಗಿ. ಸುಟ್ಟು. ಮಡುಗ. ಲೆದ್ದು. ಹಾರಿ. ಹೋಯಿ. ತೆಂದು.
(ಕೀ. 231)

3. 3. 3. 3. 3. 3. 3. 3.
3. 3. 3. 3. 3. 3. ಮು.
3. 3. 3. 3. 3. 3. 3. 3.
3. 3. 3. 3. 3. 3. ಮು.
3. 3. 3. 3. 3. 3. 3. 3.
3. 3. 3. 3. 3. 3. ಮು.
3. 3. 3. 3. 3. 3. 3. 3.
3. 3. 3. 3. 3. 3. 3. 3.

ಹೀಗೆ, ಪಲ್ಲವಿಯ ನಿರೀಕ್ಷೆಯೊಂದಿಗೆ ಈ ನುಡಿ ಮುಗಿಯುತ್ತದೆ. ಇದರಲ್ಲಿ 5 ನೆಯ ಪಾದದ ಎರಡನೆಯ ಗಣವನ್ನು ಗುರುವನ್ನು ಪ್ಲುತವಾಗಿಸುವ ಮೂಲಕ ತ್ರಿಮಾತ್ರಾಮೌಲ್ಯಕ್ಕೆಹೊಂದಿಸಿಕೊಳ್ಳಬೇಕಾಗುತ್ತದೆ. ಒಂದು, ಮೂರು ಮತ್ತು ಐದನೆಯ ಪಾದಗಳಲ್ಲಿ ಒಂದು ಮತ್ತು ಐದನೆಯ ಗಣಗಳಿಗೆ ಬರುವ ಆದಿಪ್ರಾಸವನ್ನು ಗಮನಿಸಿದಾಗ ಇದು ಭೋಗ ಷಟ್ಪದಿಯ ಒಂದೂವರೆಯಷ್ಟಕ್ಕೆ ಕೊನೆಯಲ್ಲಿ ಅಷ್ಟಗಣಪಾದದ ಸಮ ದ್ವಿಪದಿಯೊಂದನ್ನು ಕೂಡಿಸುವುದರ ಮೂಲಕ ರೂಪಿಸಿದ ಬಂಧವೆಂಬುದು ಸ್ಪಷ್ಟವಾಗುತ್ತದೆ.

| | |
|---|---|
| 2. ಸತ್ಯ. ಧರ್ಮಗಳ. ನಿತ್ಯವು. ಬೋಧಿಸೆ. | 3. 5. 4. 4. |
| ತೊತ್ತಿನ. ಮನಸಿಗೆ. ಸೊಗಸೀ. ತೆ. | 4. 4. 4. ಮು. |
| ತತ್ವದ. ಅರ್ಥವಿ. ಚಿತ್ರದಿ. ಪೇಳಲು. | 4. 4. 4. 4. |
| ಕತ್ತೆಯ. ಚಿತ್ತಕೆ. ಹತ್ತೀ. ತೆ. | 4. 4. 4. ಮು. |
| ಪುತ್ತಳಿ. ಬೊಂಬೆಯ. ಚಿತ್ರದಿ. ಬರೆದರೆ. | 4. 4. 4. 4. |
| ಮುತ್ತನು. ಕೊಟ್ಟರೆ. ನುಡಿದೀ. ತೆ. | 4. 4. 4. ಮು. |
| ಕಸ್ತುರಿ. ತಿಲಕವ. ನೊತ್ತಿ ಘ.ಣೆಯೊಳಿಡೆ. 4. 4. 4. 4. | |
| ಅರ್ತಿಯು. ತೋರದೆ. ಇದ್ದೀ. ತೆ. | 4. 4. 4. ಮು. |
| | (ಕೀ. 25) |

ಇಲ್ಲಿ ಮೊದಲ ಪಾದದ ಮೊದಲೆರಡು ಗಣಗಳಲ್ಲಿ ಗಣಪರಿವೃತ್ತಿ ಬಂದಿದೆ. ಒಟ್ಟಾರೆಯಾಗಿ ಬಂಧವನ್ನು ಗಮನಿಸಿದಾಗ ಈ ನುಡಿಯು ಶರಷಟ್ಪದಿಯ ಎರಡು ನುಡಿಗಳ ಬೆಸುಗೆಯಿಂದ ರೂಪಿತವಾಗಿರುವುದು ಸ್ಪಷ್ಟವಾಗುತ್ತದೆ.

3. ಆನೆ ನೆಗ. ಳಿಗೆ ಸಿಲುಕಿ. ಅರೆಬಾಯ. ಬಿಡುತಲಿರೆ.
ಮೌನದಿಂ. ಬಂದು ಕಾ. ಯ್ದೆ.
ಹೇ ನಾರ. ಗಾ ಎಂದ. ಜಾಮಿಳಗೆ. ಸಾಯುಜ್ಯ
ನೀನೊಲಿದು. ಕೃಪೆಮಾಡಿ. ದೆ.
ಹಾನಿ ಯಿ.ಲ್ಲದ ಪದವಿ. ನೀನಿತ್ತು. ಧ್ರುವನಿಗೆ(s).
ದೀನತ್ವ. ವನು ಬಿಡಿಸಿ. ದೆ.
ದಾನವಾಂ. ತಕ ಸಕಲ. ದಿವಿಜ ಮುನಿ. ವಂದ್ಯ. ಅಭಿ.
ಮಾನಿ ಎ. ನ್ನನೂ ಸಲಹ. ದೆ. ಬರಿದೆ

(ಕೀ. 63)

5. 5. 5. 5.
5. 5. ಮು.

5. 5. 5. 5.
5. 5. ಮು.
5. 5. 5. 5.
5. 5. ಮು.
5. 5. 5. 5.
5. 5. ಮು. +ಕೊಂಡಿಗಣ.

ಕೊನೆಯ 'ಬರಿದೆ' ಎಂಬುದು ಕೊಂಡಿಗಣ. ಮುಂದೆ ಪಲ್ಲವಿಯ ಸಂಬಂಧವನ್ನು ಕಲ್ಪಿಸುವ ಕೊಂಡಿ ಅದಾಗಿದೆ. ಅದನ್ನು ಬಿಟ್ಟು ಉಳಿದಂತೆ, ವಾರ್ಧಕಷಟ್ಪದಿಯ ದೀರ್ಘಪಾದಗಳಂತಹ ನಾಲ್ಕು ಪಾದಗಳನ್ನು ಎಂಟಾಗಿ ಒಡೆದಿಟ್ಟು ಆದಿಪ್ರಾಸವನ್ನು ಹೊಂದಿಸುವುದರ ಮೂಲಕ ರೂಪಿಸಿದ ಬಂಧವಿದೆಂಬುದನ್ನು ಗಮನಿಸಬೇಕು.

ಇಂತಹುದೇ ಬಂಧದಲ್ಲಿ ಕೊನೆಯ ಎರಡು ಪಾದಗಳಿಗೆ ಬದಲಾಗಿ ಕುಸುಮ ಷಟ್ಪದಿಯ ಅರ್ಧಭಾಗದಿಂದ ರೂಪಿತವಾದ ದ್ವಿಪದಿಯೊಂದನ್ನು ಕೂಡಿಸುವುದರಿಂದ, ಎಂದರೆ, ಎಂಟನೆಯ ಪಾದದಲ್ಲಿ ಪಂಚಮಾತ್ರಾಗಣವೊಂದನ್ನು ಅಧಿಕವಾಗಿ ತರುವುದರಿಂದ ರೂಪಿತವಾಗಿರುವ ಬಂಧವನ್ನು ಈ ಮುಂದಿನ ಉದಾಹರಣೆಯಲ್ಲಿ ಗಮನಿಸಬಹುದು :

4. ಒಲಿಸುವುದ. ನರಿಯೆ ಮೆ. ಚ್ಚಿಸುವ ಬಗೆ. ಯರಿಯೆ ಹೊಗ.
ಳುವ ಹೊಲಬ. ನಾನರಿಯೆ. ನು
ತಿಳಿದು ದಿ. ಲ್ಲವು ಷೋಡ. ಶೋಪಚಾ. ರದ ಪೂಜೆ.
ಗಳಲೊಂದು. ಪರಿಯಾದ. ರು.
ನೆಲೆಯ ಕಾ. ಣೆನು ನಿಗಮ. ಶಾಸ್ತ್ರ ನವ. ವಿಧ ಭಕ್ತಿ.
ಯೊಳಗೊಂದು. ಬಗೆಯಾದ. ರು.
ಅಳಿಲ ಸೇ. ವೆಯನೊಪ್ಪಿ. ಕೊಂಡು ಶರ. ಣನ ಸಲಹೊ.
ನೆಲೆಯಾದಿ. ಕೇಶವನೆ. ಸ್ವಾಮಿ ಪ್ರೇ. ಮಿ.

5. 5. 5. 5.
5. 5. ಮು.
5. 5. 5. 5.
5. 5. ಮು.
5. 5. 5. 5.
5. 5. ಮು.
5. 5. 5. 5.
5. 5. 5.

ಎರಡನೆಯ ಪಾದದಲ್ಲಿ ಆದಿಪ್ರಾಸ ತಪ್ಪಿರುವುದು ಈ ನುಡಿ ವಸ್ತುತಃ ನಾಲ್ಕು ಪಾದಗಳದ್ದೇ ಆಗಿರಬಹುದೇ ಎಂಬ ಸಂಶಯಕ್ಕೂ ಎಡೆಮಾಡಿಕೊಡುತ್ತದೆ. ಆದರೆ ಸಂಪಾದಕರು ಹೀಗೆಯೇ ಕೊಟ್ಟಿರುವುದರಿಂದ ಮತ್ತು ಉಳಿದೆಲ್ಲ ಪಾದಗಳಲ್ಲೂ ಆದಿ ಪ್ರಾಸ ನಿಯತವಾಗಿರುವುದರಿಂದ ಇಲ್ಲಿಯೂ ಇದನ್ನು ಅಷ್ಟಪದಿಯಾಗಿಯೇ ಪರಿಗಣಿಸಿದೆ.

5. ಸುರಭಿ ಶಾ. ವಂತಿ ಮ. ಲ್ಲಿಗೆ ಮೊಲ್ಲೆ. ಬಕುಳ ಪಾ. 5. 5. 5. 5.
ದರಿ ಚಂಪ. ಕಾ ಕಾಂಚಿ. ಕಣಿಗಲು. ಶ್ರೀತುಳಸಿ. 5. 5. 5. 5.
ಪರಿಮಳದ. ಪಚ್ಚೆತೆನೆ. ಹರಿಪಾದ. ಕರ್ಪಿಸುತೆ. 5. 5. 5. 5.
ನಿರುಮಾಲ್ಯ. ಪರಿಮಳವ. ನಾಘ್ರಾಣಿ. ಸೆನೆ ಒಲ್ಲೆ. 5. 5. 5. 5.
ಬಿರಿವ ಕೆಂ. ಜಾಜಿಪು. ಷ್ಪಂಗಳಂ. ವನಿತೆಯರ. 5. 5. 5. 5.
ಸಿರಿಮುಡಿಗೆ. ಮುಡಿಸಿ ಕುಂ. ತಳ ಸೌರ. ಭವ ಕಂಡು. 5. 5. 5. 5.
ಹರುಷದಿಂ. ರೋಮಪುಳ. ಕಿತನಾಗು. ತಡಿಗಡಿಗೆ. 5. 5. 5. 5.
ಪರಮ ಸಂತೋಷಮಂ. ನೀ ಪಡೆಯು. ತಿಹೆ ಮರುಳೆ. 5. 5. 5. 5.

ಲಲಿತರಗಳೆಯ ಪಾದಗಳಿಂದಾದ ಈ ಬಂಧದಲ್ಲಿ ಅಂತ್ಯಪ್ರಾಸವನ್ನು ಕೈಬಿಡಲಾಗಿದೆ. ಇದರ ಜೊತೆಗೆ ಆದಿಪ್ರಾಸವನ್ನೂ ಕೈಬಿಟ್ಟು ಪಾದಸಂಖ್ಯೆಯ ಕಟ್ಟನ್ನೂ ಮುರಿದಿದ್ದಲ್ಲಿ ಇದು ಸರಳರಗಳೆಯೇ ಆಗುತ್ತಿತ್ತೆಂಬುದು ಗಮನಾರ್ಹ. ಹಾಗಾಗಿದ್ದಲ್ಲಿ ಇಂದಿನ ಸರಳರಗಳೆಯ ಇತಿಹಾಸ ಬಹಳಷ್ಟು ಹಿಂದಕ್ಕೆ ಹೋಗುತ್ತಿತ್ತು; ಅಂತೆಯೇ, ಪರಕೀಯರ ಅನುಕರಣೆಯಿಂದ ಬಂದುದಲ್ಲವೆಂಬ ಹೆಗ್ಗಳಿಕೆ ಅದರದಾಗುತ್ತಿತ್ತು.

ಈ ರೀತಿಯ ಸಮ ಅಷ್ಟಪದಿ ಬಂಧದಲ್ಲೇ ಮೂರು ಮತ್ತು ಎಂಟನೆಯ ಪಾದಗಳ ಸ್ಥಾನದಲ್ಲಿ ಊನಪಾದಗಳನ್ನು ತಂದಿರುವ ಮತ್ತೊಂದು ವಿಧವನ್ನು ಕನಕದಾಸರಲ್ಲಿ ಕಾಣುತ್ತೇವೆ. ಅದಕ್ಕೆ ಈ ಮುಂದಿನದು ಉದಾಹರಣೆಯಾಗಿದೆ :

6. ತಂದೆ ತಾ. ಯಿಗಳಾರು. ಅಂದಿದ್ದ. ಊರೇನು.
ಮಂದಿರವ. ದೆಲ್ಲಿತಾ. ತಂದ ಸತಿ. ಸುತರಾರು.
ಬಂದಂಥ. ಸುಖದುಃಖ. ವೇನು.
ಹಿಂದೆನ್ನ. ಕುಲ ಗೋತ್ರ. ನಾಮಂಗ. ಳೆನಗೇನು.
ಅಂದು ಕೊಂ. ದವರಾರು. ಇಂದು ಕಾ. ಯ್ವರದಾರು.
ಕಂದಬಾ. ರೆಂದು ಲಾ. ಲಿಸಿದವರ. ನಾಕಾಣೆ.
ತಂದೆ ನೆಲೆ. ಯಾದಿಕೇ. ಶವನೆ ನಿ. ನ್ನಯ ಪಾದ.
ದ್ವಂದ್ವವನು. ಬಿಡೆನು ಬಿಡೆ. ನೊ.

5. 5. 5. 5.
5. 5. 5. 5.
5. 5. ಪ.
5. 5. 5. 5.
5. 5. 5. 5.
5. 5. 5. 5.
5. 5. 5. 5.
5. 5. ಮು.

ಮೂರನೆಯ ಪಾದದಲ್ಲಿ ಮುಡಿಗೆ ಬದಲು ಪದ್ಮಗಣ ಬರುವುದನ್ನು ಬಿಟ್ಟರೆ ಉಳಿದಂತೆ ಈ ಬಂಧವು ವಾರ್ಧಕಷಟ್ಪದಿಯ ಒಂದು ನುಡಿಯನ್ನೇ ವಿಶಿಷ್ಟ ರೀತಿಯಲ್ಲಿ ಅಳವಡಿಸಿ ರೂಪಿಸಿದ ಅಷ್ಟಪದಿಯೆಂಬುದು ಸ್ಪಷ್ಟವಾಗುತ್ತದೆ.

ಈವರೆಗಿನ ಪರಿಶೀಲನೆಯಿಂದ ಮತ್ತು ಈ ಜಾಡಿನಲ್ಲಿ ಮಾಡಿದ ಅಧ್ಯಯನ ದಿಂದ, ಕನಕದಾಸರ ಕೀರ್ತನೆಗಳಲ್ಲಿ ಗುರುತಿಸಬಹುದಾದ ತಾಳ ಮಾತ್ರಾಛಂದಸ್ಸುಗ ಳಿಗೆ ಸಂಬಂಧಿಸಿದಂತೆ ತಿಳಿದು ಬರುವ ಅಂಶಗಳನ್ನು ಹೀಗೆ ಪಟ್ಟಿ ಮಾಡಬಹುದು

೧. ಕನಕದಾಸರು ತಮ್ಮ ಕೀರ್ತನೆಗಳಲ್ಲಿ ದ್ವಿಪದಿ, ತ್ರಿಪದಿ, ಚೌಪದಿ ಪಂಚಪದಿ, ಷಟ್ಪದಿ ಮತ್ತು ಅಷ್ಟಪದಿ ಬಂಧಗಳನ್ನು ಬಳಸಿದ್ದಾರೆ. ಸಪ್ತಪದಿಯನ್ನಾಗಲಿ, ಎಂಟಕ್ಕಿಂತ ಹೆಚ್ಚು ಪಾದಗಳ ಬಂಧಗಳನ್ನಾ-ಗಲೀ ಬಳಸಿಲ್ಲ.

೨. ಚೌಪದಿ ಮತ್ತು ಅಷ್ಟಪದಿಗಳು ವೈವಿಧ್ಯಮಯವಾಗಿವೆ.

೩. ದ್ವಿಪದಿ, ತ್ರಿಪದಿ, ಪಂಚಪದಿಗಳ ಬಳಕೆ ಬಹಳ ಕಡಿಮೆ.

೪. ಷಟ್ಪದಿಗಳಲ್ಲಿ ಭೋಗ, ವಾರ್ಧಕಗಳನ್ನು ಮಾತ್ರ ಬಳಸಿದ್ದಾರೆ.

೫. ಲಯದ ದೃಷ್ಟಿಯಿಂದ ಕೂಡ ಉತ್ಸಾಹ ಮತ್ತು ಲಲಿತಗಳ ಬಳ-ಕೆಯೇ ಹೆಚ್ಚು.

೬. ಬಳಸಿರುವ ಬಂಧಗಳಲ್ಲಿ ಶಿಷ್ಟ ಸಾಹಿತ್ಯದಲ್ಲಿ ಸಿಕ್ಕದೇ ಇರುವಂತ-ಹವೇ ಬಹಳಷ್ಟು ಇವೆ.

೭. ತಾಳಲಯದ ಪ್ರಭಾವದ ಕಾರಣದಿಂದಾಗಿ, ಹ್ರಸ್ವೀಕರಣ, ದೀರ್ಘೀ-ಕರಣ ಪ್ರಕ್ರಿಯೆಗಳನ್ನು ಅಲ್ಲಲ್ಲಿ ಸಹಾಯಕ್ಕೆ ತೆಗೆದುಕೊಳ್ಳಬೇಕಾಗು-ತ್ತದೆ.

ಒಟ್ಟಾರೆಯಾಗಿ ಈವರೆಗಿನ ಅಧ್ಯಯನದಿಂದ (೧) ಕನಕದಾಸರ ಕೀರ್ತನೆಗಳಲ್ಲಿ ಗುರುತಿಸಬಹುದಾದ ಛಂದೋರೂಪಗಳ ವೈವಿಧ್ಯ ಎಷ್ಟೊಂದಿದೆ, ಎಂಬುದು ಸ್ಪಷ್ಟವಾಗುತ್ತದೆ; (೨) ಕನಕದಾಸರ ಕಾಲದಲ್ಲಿ ಜನರ ನಾಲಿಗೆಯಲ್ಲಿ ಪ್ರಚಲಿತವಿದ್ದ ಛಂದೋರೂಪಗಳು ಯಾವುವು ಎಂಬುದರ ಪರಿಚಯವಾಗುತ್ತದೆ; (೩) ಶಿಷ್ಟ ಸಾಹಿತ್ಯದಲ್ಲಿ ಎಡೆಪಡೆಯದ ಎಷ್ಟೊಂದು ಬಂಧಗಳು ಈ ಕೀರ್ತನೆಗಳಲ್ಲಿ ಎಡೆಪಡೆದುಕೊಂಡಿವೆ ಎಂಬುದರ ಪರಿಚಯವಾಗುತ್ತದೆ; (೪) ಛಂದಸ್ಸಿನ ಇತಿಹಾಸದ ಸರಪಣಿಯಲ್ಲಿ ನಡುನಡುವೆ ಕಳಚಿಕೊಂಡಿರುವ ಕೊಂಡಿಗಳನ್ನು ಪುನರ್ನಿರ್ಮಿಸಲು ಸಹಾಯವಾಗುತ್ತದೆ; (೫) ಆಸಕ್ತರಾದ ಹೊಸಕವಿಗಳಿಗೆ ಇದರಿಂದ ಮಾರ್ಗದರ್ಶನ ದೊರೆಯುತ್ತದೆ.

***

# ಕನಕದಾಸರ ಸಾಹಿತ್ಯದಲ್ಲಿ ತತ್ವಜ್ಞಾನ

ಬನ್ನಂಜೆ ಗೋವಿಂದಾಚಾರ್ಯ.

## ಪ್ರಸ್ತಾವನೆ

ದಾಸಪಂಥ ಪ್ರಾರಂಭವಾದದ್ದು - ಈಗ ನಮಗೆ ತಿಳಿದಿರುವ ದಾಖಲೆಗಳಂತೆ ಆಚಾರ್ಯಮಧ್ವರಿಂದ ಅವರು ಸ್ವತಃ ಭಜನೆಗಳನ್ನು ಹಾಡಿ - ಶಿಷ್ಯರಿಂದ ಗುಂಪಾಗಿ ಹಾಡಿಸಿಕೊಂಡು - ಸಂಚರಿಸುತ್ತಿದ್ದರು ಎಂದು ಅವರ ಚರಿತ್ರೆಯಿಂದ ತಿಳಿಯುತ್ತದೆ. ಅವರು ಕನ್ನಡದಲ್ಲಿ ಕೀರ್ತನೆಗಳನ್ನು ಬರೆದಿರುವ ಸಂಭವವಿದ್ದರೂ ಈಗಂತು ಯಾವುದೂ ಉಪಲಬ್ಧವಿಲ್ಲ. ತುಳುಹಾಡುಗಳನ್ನು ಬರೆದಿದ್ದರು ಎನ್ನುವ ಒಂದು ಐತಿಹ್ಯ ಉಂಟು. ಏನಿದ್ದರೂ ಅವರು ಶ್ರೇಷ್ಠ ವಾಗ್ಗೇಯಕಾರರು ಎನ್ನುವುದರಲ್ಲಿ ಸಂದೇಹವಿಲ್ಲ. ಅವರ ದ್ವಾದಶಸ್ತೋತ್ರಗಳಂತು ಸಂಸ್ಕೃತ ಸಾಹಿತ್ಯದಲ್ಲೆ ಅಪೂರ್ವವಾದ ಹಾಡುಗಬ್ಬಗಳು.

ಅವರು ಹಿರಿಯ ಸಂಗೀತಗಾರರೂ ಆಗಿದ್ದರು. ಗೋವೆಯಲ್ಲಿ ಸಂಗೀತಕಛೇರಿ ನಡೆಸಿ ಜನರನ್ನು ಮುಗ್ಧಗೊಳಿಸಿದ ಘಟನೆಯನ್ನು ಮಧ್ವವಿಜಯ ಉಲ್ಲೇಖಿಸುತ್ತದೆ. ತ್ರಿವಿಕ್ರಪಂಡಿತರು ಆಚಾರ್ಯರನ್ನು 'ಗಂಧರ್ವವಿದ್ಯಾನಿಪುಣ' ಎಂದು ಕೊಂಡಾಡಿದ್ದಾರೆ.

ಸಂಗೀತದ ವಿವಿಧನಾದದ ತರಂಗಗಳಿಂದ ಗಿಡಗಳಲ್ಲಿ ವಿಶಿಷ್ಟವಾದ ಪ್ರತಿಕ್ರಿಯೆ ಮೂಡುತ್ತದೆ ಎನ್ನುವ ಮಾತನ್ನು ಹೇಳಿದ ಭಾರತೀಯ ತತ್ವಜ್ಞಾನಿಗಳಲ್ಲಿ ಮೊದಲಿಗರು ಆಚಾರ್ಯಮಧ್ವರು : "ಗೀತಾತ್ ಪುಷ್ಪಫಲಾವಾಪ್ತಿಃ".

1238 ರಿಂದ 1317 (ಕ್ರಿ.ಶ.) ಆಚಾರ್ಯರು ಬದುಕಿದ್ದ ಕಾಲ-ಎನ್ನುವುದು ಹೆಚ್ಚಿನ ವಿದ್ವಾಂಸರ ಅಭಿಪ್ರಾಯ. ಇದೇ ದಾಸಪಂಥದ ಬೀಜಕ್ಷೇಪದ ಕಾಲ ಕೂಡ. ಆಚಾರ್ಯರ ಅನಂತರ ಅವರ ಶಿಷ್ಯರಾದ ನರಹರಿತೀರ್ಥರು ಕನ್ನಡದಲ್ಲಿ ಹಾಡುಗಬ್ಬ ಬರೆದ ಮೊದಲ ವಾಗ್ಗೇಯಕಾರ ಯತಿಗಳು. ಈ ದೃಷ್ಟಿಯಲ್ಲಿ ಇವರೇ ಕರ್ನಾಟಕದ ದಾಸಪಂಥದ ಮೂಲ ಪುರುಷರು. 14 ನೆಯ ಶತಕದ ಪೂರ್ವಾರ್ಧದಲ್ಲಿದ್ದ ಇವರು ಮಠಗಳಲ್ಲಿ 'ಭಾಗವತ'ರ ಮೂಲಕ ಕನ್ನಡ ಹಾಡುಗಳನ್ನು ಹಾಡುವ ಪರಂಪರೆಯನ್ನು ಪ್ರಾರಂಭಿಸಿದರು; ಮಾತ್ರವಲ್ಲ, ಅಶಿಕ್ಷಿತ ಜನಕ್ಕೆ ಪುರಾಣದ ಕಥೆಗಳನ್ನು ಮುಟ್ಟಿಸುವುದಕ್ಕಾಗಿ ಭಾಗವತರಾಟ, ಬಯಲಾಟಗಳನ್ನು ಬಳಕೆಗೆ ತಂದರು ಎನ್ನುವ ಐತಿಹ್ಯ ನಿರಾಧಾರವಾದದ್ದೇನೂ ಅಲ್ಲ. ಹೀಗೆ 14 ನೆಯ ಶತಕದ ಪೂರ್ವಾರ್ಧದಲ್ಲಿ, ಕರ್ನಾಟಕದ ನೆಲದಲ್ಲಿ ದಾಸಪಂಥ ಖಚಿತವಾದ ರೂಪ ತಾಳಿತು.

ಅನಂತರದ ಆರೇಳು ದಶಕಗಳ ಕಾಲ ಈ ಪಂಥದ ಬೆಳವಣಿಗೆಯಲ್ಲಿ ಮಹತ್ವದ ಕಾಣಿಕೆಯೇನೂ ಕಾಣಿಸುವುದಿಲ್ಲ.

15 ನೆಯ ಶತಕದ ಪೂರ್ವಾರ್ಧದಲ್ಲಿ ಶ್ರೀಪಾದರಾಜರು (ಕ್ರಿ.ಶ. 1422 -- 80) ದಾಸಪಂಥದ ಪ್ರವರ್ತಕರಾಗಿ ನಿಂತರು. ಇವರ ವಿದ್ಯಾಶಿಷ್ಯರಾದ ಶ್ರೀವ್ಯಾಸತೀರ್ಥರಂತು ದಾಸಕೂಟವನ್ನೆ ಕಟ್ಟಿದ ಮಹಾಪುರುಷರು.

ವ್ಯಾಸತೀರ್ಥರು ಹಿರಿಯ ವಿದ್ವಾಂಸರಷ್ಟೇ ಆಗಿರಲಿಲ್ಲ; ಸ್ವತಃ ಸಂಗೀತಗಾರರು, ವಾಗ್ಗೇಯಕಾರರು ಆಗಿದ್ದರು. ಇವರಲ್ಲಿ ಬಂದು ಅಧ್ಯಯನ ಮಾಡಿದ ವಾದಿರಾಜರು ಮುಂದೆ ತುಳುನಾಡಿನಲ್ಲಿ ದಾಸಪಂಥದ ಆದ್ಯಪ್ರವರ್ತಕರಾದರು. ಪುರಂದರ ದಾಸರು, ಕನಕದಾಸರು ಇವರ ಪ್ರಭಾವಲಯದಲ್ಲೆ ಇವರ ಶಿಷ್ಯರಾಗಿ ದಾಸಪಂಥವನ್ನು ಕರ್ನಾಟಕದಲ್ಲಿ ದೃಢವಾಗಿ ಕಟ್ಟಿ ಬೆಳೆಸಿದವರು. ದಾಸಸಾಹಿತ್ಯದ ಸಂದೇಶವನ್ನು ಕನ್ನಡದ ಮನೆಮನೆಗೆ ಮುಟ್ಟಿಸಿದವರು.

ಹೀಗೆ ಆಚಾರ್ಯಮಧ್ವರಿಂದ ದಾಸಸಾಹಿತ್ಯದ ಬೀಜಕ್ಷೇಪವಾಯಿತು. ನರಹರಿ ತೀರ್ಥದಲ್ಲಿ ಈ ಬೀಜ ಸುಳಿಯೊಡೆಯಿತು. ಶ್ರೀಪಾದರಾಜರು ನೀರೆರೆದು ಈ ಸಸಿಯನ್ನು ಗಿಡವಾಗಿ ಬೆಳಸಿದರು. ವ್ಯಾಸತೀರ್ಥರಕಾಲದಲ್ಲಿ ಅದು ಹೆಮ್ಮರವಾಗಿ ಬೆಳೆದು ವಾದಿರಾಜ, ಪುರಂದರ, ಕನಕರಂಥ ಶಾಖೋಪಶಾಖೆಗಳನ್ನು ದಿಗ್ದಿಗಂತಗಳಿಗೆ ಹಬ್ಬಿಸಿ ಆಲದ ಹರವು ಪಡೆಯಿತು. ಈ ಆಲದ ಎಲೆಯ ಮೇಲೆ ಭಗವಂತ ಪವಡಿಸಿ ತನ್ನ ಬಾಲಲೀಲೆಯ ಮೂಲಕ ಭಾವುಕ ಜನವನ್ನು ಮುಗ್ಧಗೊಳಿಸಿದ.

## ಕನಕದಾಸರು

ಈ ಹಿನ್ನೆಲೆಯಲ್ಲಿ ಕನಕದಾಸರನ್ನು ನಾವು ಕಂಡಾಗ ಅವರ ಬೆಳವಣಿಗೆಯ ಮಜಲನ್ನು ಗುರುತಿಸುವುದು ಸುಲಭವಾಗುತ್ತದೆ.

ಕನಕದಾಸರ ಬಗ್ಗೆ ಮಾತನಾಡುವಾಗ ಒಂದು ಮಾತನ್ನು ಗಮನದಲ್ಲಿಡಬೇಕು. ಇಂಥ ಸಂದರ್ಭದಲ್ಲಿ ವಸ್ತು ನಿಷ್ಠರಾಗಿ ಯೋಚಿಸುವ ಬದಲು ಭಾವಪರವಶರಾಗುವವರೆ ಹೆಚ್ಚು. 'ಕುರುಬರನ್ನು ನಾವು ಸಂತರಾಗಿ ಸ್ವೀಕರಿಸಿದ್ದೇವೆ' ಎಂದು ಸಂಪ್ರದಾಯವಾದಿಗಳೆಲ್ಲ ತಮ್ಮ ವಿಶಾಲಮನೋಭಾವನೆಯನ್ನು ಸಮರ್ಥಿಸಿಕೊಂಡು ಬೆನ್ನು ಚಪ್ಪರಿಸಿಕೊಳ್ಳಲು ಕನಕದಾಸರನ್ನು ಅಸ್ತ್ರವಾಗಿ ಬಳಸುತ್ತಾರೆ. ಅವರು ಮೂಲತಃ ನಂಬಿಕೆಯಲ್ಲಿ ಶ್ರೀ ವೈಷ್ಣವರೋ ಮಾಧ್ವರೋ ಎನ್ನುವ ಬಗ್ಗಯೂ ಇಂಥದೇ ಚರ್ಚೆ ನಡೆದಿದೆ. ಇಂಥ ಅತಿವಾದಗಳಿಂದ ಏನನ್ನು ಸಾಧಿಸಲಾಗುವುದಿಲ್ಲ.

ವಾಲ್ಮೀಕಿ ಕುರುಬ ಎನ್ನುತ್ತಾರೆ. ಹೌದೋ ಅಲ್ಲವೋ ಗೊತ್ತಿಲ್ಲ. ಕಾಳಿದಾಸ ಕುರುಬ ಎನ್ನುತ್ತಾರೆ. ಹೌದೋ ಅಲ್ಲವೋ ಗೊತ್ತಿಲ್ಲ. ಪ್ರಾಯಃ ಅಲ್ಲ. ಆದರೆ ಕನಕದಾಸರು ಕುರುಬ ಹೌದು. ಹಾಗೆಂದು ಅವರೇ ಹಾಡೊಂದರಲ್ಲಿ ಹೇಳಿಕೊಂಡದ್ದುಂಟು:

"ನಾವು ಕುರುಬರು ನಮ್ಮದೇವರು ಬೀರಯ್ಯ"

ಆದರೆ ಅದರ ಜತೆಗೆಯೆ ನಿಜವಾದ ಕುರುಬರು ಬೇರೆಯೆ ಇದ್ದಾರೆ ಎಂದೂ ಅವರು ಎಚ್ಚರಿಸುತ್ತಾರೆ:

ಕಾಗಿನೆಲೆಯಾದಿ ಕೇಶವನಂಘ್ರಿವಾರಿಜವ
ನೆರೆನಂಬದವನೆ ಕುರುಬ

ಯಾವ ಸಂಸ್ಕಾರವೂ ಇಲ್ಲದೆ ಜನಿವಾರ ಹೊತ್ತ ಪ್ರಾರಬ್ಧಕ್ಕಾಗಿ ತನ್ನನ್ನು ಬ್ರಾಹ್ಮಣ ಎಂದು ಕರೆಯಿಸಿಕೊಳ್ಳುವ ನಾಮ ಮಾತ್ರ ಧಾರಿ ಬ್ರಾಹ್ಮಣನಿಗಿಂತ ಸಂಸ್ಕಾರವಂತನಾದ ಕುರುಬ ಮೇಲಲ್ಲವೆ?

ಹಲವು ದಾಸರ ಮನೆಯ ಹೊಲೆದಾಸ ನಾನಯ್ಯ
ಕುಲವಿಲ್ಲದ ದಾಸ ಕುರುಬ ದಾಸ
ಹರಿಭಕುತಿ ಶೀಲ ರಹಿತ ಬ್ರಾಹ್ಮಣ ನಾನಾಗಲೊಲ್ಲೆ
ಮೇಲನರಿತು ವಿಷ್ಣು ಭಕುತಿಯ ಮಾಳ್ಪ
ಚಾಂಡಾಲರ ಮನೆಯ ಕಾಯಿಸೆನ್ನನು

ಆ ಕಾಲದ ಮಡಿವಂತ ಬ್ರಾಹ್ಮಣರು ಇವರನ್ನು ಕುರುಬ ಎಂದು ದೇವಾಲಯದೊಳಕ್ಕೆ ಬರಗೊಡದೆ ದೂರ ಇಟ್ಟದ್ದಕ್ಕಾಗಿ ರೋಸಿ ನೊಂದು ಅವರು ಹೀಗೆ ಬರೆದರು ಎಂದು ಕೆಲವರು ಹೇಳುತ್ತಾರೆ. ಇದೂ ಒಂದು ಅತಿವಾದ. ಕನಕದಾಸರಿಗೆ ಬ್ರಾಹ್ಮಣರಿಂದ ಮಡಿವಂತಿಗೆಯ ತಡೆ ಬಂದಿರಬಹುದು. ಆದರೆ ಆ ಕಾಲದ ಸಾಮಾಜಿಕ ನಿಯಮವನ್ನು ಒಗ್ಗಿಸಿಕೊಂಡು ಒಪ್ಪಿಕೊಂಡು ಬೆಳೆದವರು ಅವರು. ಜಾತಿಪದ್ಧತಿಯನ್ನೆ ಕಿತ್ತೊಗೆಯಬೇಕು ಎನ್ನುವ ಕ್ರಾಂತಿಯ ದೃಷ್ಟಿ ಕನಕದಾಸರ ಕನಸಿನಲ್ಲೂ ಇದ್ದಂತಿಲ್ಲ. 20 ನೆಯ ಶತಕದ ಬಲವು -- ನಿಲವುಗಳನ್ನು ನಾಲ್ಕು ಶತಕ ಹಿಂದೆ ಬದುಕಿದ ಒಬ್ಬ ಸಂತನ ಮೇಲೆ ಹೇರಿ ವ್ಯಾಖ್ಯಾನಿಸುವುದೂ ಒಂದು ಬಗೆಯ ಅಪಚಾರದ ಆವೇಶವೇ. ಕನಕದಾಸರು ಜಾತಿಪದ್ಧತಿಯನ್ನು ಒಪ್ಪಿಕೊಂಡು ಅದರ ಹೆಸರಿನಲ್ಲಿ ನಡೆಯುತಿದ್ದ ಸೋಗು ಡಂಭಾಚಾರಗಳನ್ನು ಮಾತ್ರ ಎತ್ತಿ ತೋರಿಸಿ ಟೀಕಿಸಿದರು. ವೈಷ್ಣವ ಪಂಥದ ಜಾಗೃತಿಯ ಕಾಲದಲ್ಲಿ ಈ ಮನೋಭಾವ ಸಾಮಾಜಿಕವಾಗಿ ಬೇರೂರಿತ್ತು ಎನ್ನುವುದನ್ನು ನಾವು ಗಮನಿಸಬೇಕು. ಎಂತಲೇ ಜಾತಿವಾದದ ಹಿನ್ನೆಲೆಯಲ್ಲಿ ಬೆಳೆದ ಹೊಲಸನ್ನು ಪುರಂದರದಾಸರಂಥ ಬ್ರಾಹ್ಮಣಸಂತರೂ ಟೀಕಿಸಲು ಹಿಂಜರಿಯಲಿಲ್ಲ ಎನ್ನುವುದನ್ನು ಗಮನಿಸಬೇಕು. ಆದರೆ ಒಬ್ಬ ಶೂದ್ರನಾಗಿ ಕನಕದಾಸರಿಗೆ ಈ ಅನುಭವ ಹೆಚ್ಚು ತೀಕ್ಷ್ಣವಾಗಿ ಕಾಡಿರುವುದು ಸಾಧ್ಯ. ಅದರಿಂದಲೆ ಅವರ ಮಾತಿನ ಮೊನೆಯೂ ಉಳಿದವರಿಗಿಂತ ಹೆಚ್ಚು ಚುರುಕಾಗಿದೆ. ಜಾತಿವಾದದ ಡಂಭಾಚಾರದ ಬಗ್ಗೆ ವೈಷ್ಣವಪಂಥ ಜಾಗೃತಗೊಂಡದ್ದು

ದಾಸಸಾಹಿತ್ಯದ ಉಗಮದ ಕಾಲದಲ್ಲಷ್ಟೆ ಅಲ್ಲ. ಭಾಗವತ ಪುರಾಣದಲ್ಲಿ ಇದಕ್ಕೆ ಮೂಲ ದೊರಕುತ್ತದೆ :

ಅಹೋ ಬತ ಶ್ವಪಚೋಽತೋ ಗರೀಯಾನ್
ಯಜ್ಜಿಹ್ವಾಗ್ರೇ ವರ್ತತೇ ನಾಮ ತುಭ್ಯಮ್ (3. 34. 6.)

(ಭಗವಂತನ ನಾಮ ನಾಲಗೆಯಲ್ಲಿ ನಲಿಯುವ ಹೊಲೆಯನೇ ಬ್ರಾಹ್ಮಣನಿಗಿಂತ ಮೇಲು. )

ವಿಪ್ರಾದ್ ದ್ವಿಷಡ್‌ಗುಣಯುತಾದರವಿಂದನಾಭ--
ಪಾದಾರವಿಂದವಿಮುಖಾಚ್ಛ್ವಪಚಂ ವರಿಷ್ಠಮ್
ಮನ್ಯೇ ತದರ್ಪಿತಮನೋವಚನಾತ್ಮಗ್ರೇಹ--
ಪ್ರಾಣಃ ಪುನಾತಿ ಸಕಲಂ ನತು ಭೂರಿಮಾನಃ (7. 9. 10.)

(ಪಂಡಿತನಾಗಿ ಗುಣವಂತನಾದರೂ ಭಗವದ್ ಭಕ್ತನಲ್ಲದ ಬ್ರಾಹ್ಮಣನಿಗಿಂತ ಹೊಲೆಯನೇ ಮೇಲು. ತನ್ನನ್ನು, ತನ್ನ ಬದುಕನ್ನು, ತನ್ನ ಸರ್ವಸ್ವವನ್ನು ಭಗವಂತನಿಗೆ ಅರ್ಪಿಸಿದ ಆ ಹೊಲೆಯನಿಂದ ಜಗತ್ತೆ ಪಾವನವಾದೀತು ಹೊರತು ತನ್ನ ಹಿರಿಮೆಯ ಹೆಗ್ಗಳಿಕೆಯಿಂದ ಬೀಗಿದ ಬ್ರಾಹ್ಮಣನಿಂದಲ್ಲ.)

ಇಂಥ ಮಾತುಗಳು ವೈಷ್ಣವಪಂಥ ಮೂಲಸ್ಫೂರ್ತಿಯನ್ನು ಗುರುತಿಸುವಲ್ಲಿ ನಮಗೆ ಸಹಕಾರಿಯಾಗುತ್ತವೆ. ದಾಸಸಾಹಿತ್ಯ ಈ ಸ್ಫೂರ್ತಿಯನ್ನು ಅರಗಿಸಿಕೊಂಡು ಬೆಳೆದಂಥದು. ಅದರಿಂದ ಕನಕದಾಸರು ಸಹಜವಾಗಿಯೇ ಈ ಮಾತನ್ನಾಡಿರಬೇಕು. ಒಬ್ಬ ಶೂದ್ರಸಂತ ಈ ಮಾತನ್ನಾಡಿದ್ದರಿಂದ ಅದಕ್ಕೆ ಹೆಚ್ಚು ಮಹತ್ವಬಂತು ಎನ್ನುವುದು ಮಾತ್ರ ಸತ್ಯ

ಕನಕದಾಸರು ಬೇಡರ ಜಾತಿಯವರು ಎಂದೂ ಇನ್ನೊಂದು ಜಾತಿಯವರೆಂದೂ ಹಲವು ವಾದಗಳುಂಟು. ಇದು ನಮಗೆ ಮುಖ್ಯವಲ್ಲ. ಆತ ಒಬ್ಬ ಬ್ರಾಹ್ಮಣೇತರ ಸಂತ ಎನ್ನುವುದು ಎಲ್ಲ ವಾದದಲ್ಲು ಸಮಾನಾಂಶ.

## ತತ್ತ್ವಜ್ಞಾನ

ಕನಕದಾಸರ ಕೃತಿಗಳಲ್ಲಿ ಕಾಣಬರುವ ತತ್ತ್ವಜ್ಞಾನಯಾವುದು? ಉಳಿದ ದಾಸರ ಕೃತಿಗಳಂತೆ ಇವರ ಕೃತಿಗಳಲ್ಲಿ ಅಖಂಡವಾಗಿ ಒಂದು ಪಂಥದ ಬದ್ಧತೆ ಕಾಣವೆ ಇರುವುದರಿಂದ ಈ ಜಿಜ್ಞಾಸೆ ಸಕಾರಣವಾಗಿದೆ. ಅವರ ಕೃತಿಗಳನ್ನು ಗಮನಿಸಿದಾಗ ಅವರ ಅಧ್ಯಾತ್ಮದ ಬೆಳವಣಿಗೆಯಲ್ಲು ಹಲವು ಮಜಲುಗಳನ್ನು ನಾವು ಗುರುತಿಸಬಹುದು.

ಕನಕದಾಸರ ವಂಶದವರು ಮೂಲತಃ ಬೀರಯ್ಯ (ವೀರಭದ್ರ)ನನ್ನು ಆರಾಧಿಸುವ ಶೈವರಿರಬೇಕು; ಲಿಂಗವಂತರಿರಬೇಕು. ಆದರೆ ತಿರುಮಲೆ ತಾತಾಚಾರ್ಯರ ಪ್ರಭಾವದಿಂದ ಅವರು ವೈಷ್ಣವರಾದರು. ಅಡ್ಡ ಭಸ್ಮದ ಬದಲು ಮೂರು ನಾಮ ಬಂತು.

ಅವರ ಪ್ರಾರಂಭದ ಜೀವನದಲ್ಲಿ ಅಧ್ಯಾತ್ಮದ ಸ್ಪರ್ಶ ಅಷ್ಟಕಷ್ಟೆ. ದಳವಾಯಿಯಾಗಿ ಯುದ್ಧರಂಗದಲ್ಲಿ ಹೋರಾಡಬೇಕಾದ ವೀರನಿಗೆ, ಸುಂದರಿ ಹದಿಹರೆಯದ ಹೆಂಡತಿಯ ಕೈಹಿಡಿದ ರಸಿಕನಿಗೆ ಅಧ್ಯಾತ್ಮದ ಬಗ್ಗೆ ಆಳವಾದ ಚಿಂತನೆ ಮಾಡಲು ಅವಕಾಶ ದುರ್ಲಭ. ಆದರೆ ಅವರ ಒಳಬಗೆಯ ತುಡಿತ ಅಧ್ಯಾತ್ಮಕ್ಕಾಗಿ ಕಾತರಿಸುತಿತ್ತು. ಅದರಿಂದಾಗಿ ಯುದ್ಧ ರಂಗದಲ್ಲಿ ನಡೆದ ಒಂದು ಪರಾಭವದ ಅಪ್ರಿಯ ಘಟನೆಯಿಂದಾಗಿ 25ರ ತರುಣದಲ್ಲೆ ಅವರು ಅಧ್ಯಾತ್ಮದತ್ತ ಹೊರಳಿದರು. ಆದರೆ ಪುರಂದರ ದಾಸರಂತೆ ಅಖಂಡ ಮಾಧ್ವ ದೀಕ್ಷೆ ಹೊತ್ತು ದಾಸಪಂಥಕ್ಕಿಳಿಯಲಿಲ್ಲ.

ಈ ಕಾಲಖಂಡದಲ್ಲಿ ಅವರು ಅನೇಕ ಪದ್ಯಗಳನ್ನು ಬರೆದಿದ್ದಾರೆ. ಮೊದಲು ಬರೆದ ಪದ್ಯಗಳಲ್ಲಿ ಹರಿ -- ಹರರ ಸಹಾಪೂಜೆಯ ಛಾಯ ಇದ್ದರೆ ಇಲ್ಲಿ ವೈಷ್ಣವ ಪ್ರಜ್ಞೆಗೆ ಒತ್ತು ಕಾಣುತ್ತದೆ. "ತಿರುಮಲಾಚಾರ್ಯ ಶ್ರೀಗುರುವೆ ಬಲ್ಲ" ಎಂದು ಶ್ರೀವೈಷ್ಣವ ಪಂಡಿತರಾದ ತಿರುಮಲೆ ತಾತಾಚಾರ್ಯರನ್ನು ತನ್ನ ಅಧ್ಯಾತ್ಮಗುರುಗಳಾಗಿ ಮೊದಲು ಒಪ್ಪಿಕೊಂಡ ಕನಕದಾಸರು ಶ್ರೀರಾಮಾನುಜರ ಬಗೆಗೂ ಭಕ್ತಿ ಭರದಿಂದ ಕೀರ್ತನೆಯೊಂದನ್ನು ಬರೆದಿದ್ದಾರೆ :

ರಾಮಾನುಜರೇ ನಮೋನಮೋ
ಸ್ವಾಮಿ ಲಕ್ಷ್ಮಣರೂಪ ನಮೋನಮೋ

ಈ ಪದ್ಯ ಕನಕದಾಸರದ್ದೆ ಹೌದೋ ಎನ್ನುವ ಬಗೆಗೆ ನನಗೆ ಇನ್ನು ಸಂಶಯ ಉಂಟು. ಇದಕ್ಕೆ ಕಾರಣ ಇದರ ಮುಂದಿನ ಸಾಲುಗಳು. 'ಕೇಶವ ಪಾದಾಂ ಬುಜ ಮಧುಕರ' ಎಂದು ರಾಮಾನುಜರನ್ನು ಕೊಂಡಾಡಿದ ಈ ಪದ್ಯದ ಮುಂದಿನ ಎರಡು ಸಾಲುಗಳನ್ನು ನೋಡಿ :

ಓಂಕಾರಮೂರುತಿ ನಮೋನಮೋ
ಕೇಶವಮೂರುತಿ ನಮೋನಮೋ

ಇವು ರಾಮಾನುಜರಿಗೆ ವಿಶೇಷಣವಾಗಿ ಬಂದಿದ್ದರೆ ತೀರ ಅಸಂಗತವಾಗುತ್ತದೆ. ಸಹಜವಾಗಿ ನೋಡಿದರೆ ಅದು ರಾಮಾನುಜರ ಸ್ತುತಿಯಾಗಿಯೆ ಬಂದಿದೆ. ಮೊದಲು ಕೇಶವದಾಸನ ಸ್ತುತಿ ಅನಂತರ ಕೇಶವನ ಸ್ತುತಿ ಎಂದು ಕೂಡಿಸಿಕೊಳ್ಳಬಹುದಾದರೆ ಇದನ್ನು ಕನಕದಾಸರ ಕೃತಿ ಎಂದು ಒಪ್ಪಿಕೊಳ್ಳಬಹುದು. ಅಂತು ಅವರು ಅಧ್ಯಾತ್ಮಕ್ಕೆ ತಿರುಗಿದ ತರುಣದಲ್ಲಿ ತನ್ನ ಮನೆತನದವರು ನಂಬಿ ನಡೆದ ಶ್ರೀವೈಷ್ಣವ ಧರ್ಮದಲ್ಲೆ ಮುಂದುವರಿದರು ಎನ್ನುವುದಂತು ಖಂಡಿತ.

ಆದರೆ ಅವರು ತನ್ನ ದಾರಿಯನ್ನು ಇನ್ನೂ ಗುರುತಿಸಿಕೊಳ್ಳುವ ಹಂತದಲ್ಲೆ ಇದ್ದರು. ವ್ಯಾಸರಾಜರ ಭೇಟಿಯಾಗುವ ತನಕವೂ ಅವರ ಚಿಂತನಕ್ಕೆ ಒಂದು ಖಚಿತ ರೂಪ ದೊರಕಿದಂತಿಲ್ಲ. ಅಲ್ಲಿಂದ ಮುಂದೆ ಅವರು ಮಾಧ್ವದೀಕ್ಷೆಯನ್ನು ಕೊನೆಯದಾಗಿ ಅಪ್ಪಿಕೊಂಡರು ಎಂದು ಕಾಣುತ್ತದೆ. ಅದರಿಂದಲೆ ಅವರ ಪ್ರಾರಂಭದ ಪದ್ಯಗಳಲ್ಲಿ ಅನೇಕ ನಂಬಿಕೆಗಳ ವಿಕ್ಷೇಪ ಕಾಣಿಸುತ್ತದೆ. ಮುಂದಿನ ಕೀರ್ತನೆಗಳಲ್ಲಿ ಅವರು ಎಳೆ ಎಳೆಯಾಗಿ ಮಾಧ್ವ ತತ್ವಜ್ಞಾನವನ್ನು ತುಂಬಿದ್ದಾರೆ. ಈ ಬಗೆಗೆ ಅವರ ಪದ್ಯಗಳಿಂದಲೇ ಕೆಲವು ಉದಾಹರಣೆಗಳನ್ನು ನೋಡೋಣ :

ಗಣಪತಿಸ್ತುತಿಯ ಒಂದು ಹಾಡು ಹೀಗಿದೆ---

ಮೋರೆ ಕಪ್ಪಿನ ಬಾವ
ಮೊರದಗಲದ ಕಿವಿ
ಕೋರೆ ದಾಡೆಯವನಾರಮ್ಮ

ಈ ಪ್ರಶ್ನೆಗೆ ಅವರೆ ಹೀಗೆ ಉತ್ತರ ನೀಡುತ್ತಾರೆ-

ಲೇಸಾಗಿ ಜನರ ಸಲಹುವ ಕಾಗಿನೆಲೆಯಾದಿ
ಕೇಶವದಾಸ ಕಾಣೆ

ವಿಶ್ವನಾಯಕನಾದ ಭಗವಂತನ ಉಪಾಸನೆಯಿಂದ ಅವನ ದಾಸನಾದ ವಿನಾಯಕನೂ ಗಜಮುಖನಾದ ಎಂಬ ಮಾಧ್ವಸಿದ್ಧಾಂತದ ಸೂಚನೆ ಈ ಮಾತಿನಲ್ಲಿದೆ.

ಶಿವಸ್ತುತಿಯಲ್ಲಿ ಕೂಡ ಇದನ್ನು ಗುರುತಿಸಬಹುದು :

ಗುರುಲಿಂಗ ಜಂಗಮವ ಅರಿಯಬೇಕಾದರೆ
ಶಿವ ಶಿವ ಶಿವ ಎನ್ನಿರೋ ಮೂಜಗದವರೆಲ್ಲ
ಶಿವ ಶಿವ ಶಿವ ಎನ್ನಿರೋ

......................................

......................................

ಪರಮಾತ್ಮನ ನೀವು ತಿಳಿಯಬೇಕಾದರೆ
ಶಿವಶಿವಶಿವ ಎನ್ನಿರೋ

......................................

ತತ್ವಪತಿ ಆದಿಕೇಶವನ ಕೂಡಬೇಕಾದರೆ
ಶಿವಶಿವ ಎನ್ನಿರೋ

ಈ ಶಿವಸ್ತುತಿ ಶೈವಸಂಪ್ರದಾಯಕ್ಕೆ ಅನುಗುಣವಾಗಿರದೆ ವಿಶೇಷತಃ ಮಾಧ್ವ ಸಂಪ್ರದಾಯಕ್ಕೆ ಅನುಗುಣವಾಗಿದೆ. ನಾರಾಯಣ ಪಂಡಿತಾಚಾರ್ಯರ ಶಿವಸ್ತುತಿಯ ಒಂದು ಪದ್ಯವನ್ನು ಇಲ್ಲಿ ನೆನಪಿಸಬಹುದು :

ತವ ಪ್ರಿಯತಮಾದತಿಪ್ರಿಯತಮಂಸದೈವಾಂತರಂ
ಪಯಸ್ಯುಪಹಿತಂ ಘೃತಂ ಸ್ವಯಮಿವ ಶ್ರಿಯೋ ವಲ್ಲಭಮ್
ವಿಭಿದ್ಯ ಲಘುಬುದ್ಧಯಃ ಸ್ವಪರಪಕ್ಷಲಕ್ಷ್ಮಾಯಿತಂ
ಪಠಂತಿ ಹಿ ಲುಠಂತಿ ತೇ ಶಠಹೃದಃ ಶುಚಾ ಶುಂಠಿತಾಃ

ಸರಸ್ವತೀಸ್ತುತಿಯಲ್ಲಿ ಈ ಪರಂಪರೆಯ ಪ್ರಜ್ಞೆ ಕಾಣಿಸುತ್ತದೆ :

ವರವ ಕೊಡು ಎನಗೆ ವಾಗ್ದೇವಿ ನಿನ್ನ
ಚರಣ ಕಮಲಂಗಳನಾ ದಯಮಾಡು ದೇವಿ

..........................................................

..........................................................

ಅವಿರಳಾಪುರಿಯ ಸಿರಿಕಾಗಿನೆಲೆಯಾದಿ
ಕೇಶವನ ಸುತನಿಗೆ ಸನ್ನುತದ ರಾಣಿವಾಸೆ

ವಿಷ್ಣುಸ್ತುತಿಯಲ್ಲು ಗಮನಿಸಬೇಕಾದ ಒಂದು ಅಂಶ ಉಂಟು. ದಾಸರು ದಶಾವತಾರಗಳ ಮೇಲೆ ಅನೇಕ ಕೀರ್ತನೆಗಳನ್ನು ಬರೆದಿದ್ದಾರೆ. ಆ ಸ್ತುತಿಯಲ್ಲಿ ಬುದ್ಧನ ವರ್ಣನೆ ಬರುತ್ತದೆ. ಶ್ರೀ ವೈಷ್ಣವರ ಸಂಪ್ರದಾಯದಂತೆ ಬುದ್ಧಾವತಾರ ದಶಾವತಾರಗಳಲ್ಲಿ ಸೇರಿಲ್ಲ. ಅದರ ಬದಲು ಬಲರಾಮ ಸೇರುತ್ತಾನೆ. ಈ ಬುದ್ಧವರ್ಣನೆ ಮಾಧ್ವಸಂಪ್ರದಾಯದಲ್ಲಿ ಅವರಿಗಿದ್ದ ದೀಕ್ಷೆಯ ಸೂಚಕವಾಗಬಲ್ಲುದು :

ಸಾಧಿಸಿ ತ್ರಿಪುರರ ಗೆಲಿದವನೆ
ಪ್ರತೀವಾದಿಸಿ ಹಯವೇರಿ ನಲಿದವನೆ

ಎಲ್ಲಕ್ಕಿಂತ ಮುಖ್ಯವಾಗಿ ಆಚಾರ್ಯಮಧ್ವರ ಅವತಾರ ತ್ರಯವನ್ನವರು ಅನೇಕ ಹಾಡುಗಳಲ್ಲಿ ಮುಕ್ತ ಕಂಠದಿಂದ ಸ್ತುತಿಸಿದ್ದುಂಟು.

"ಗುರುಮುಖ್ಯ ಪ್ರಾಣನ ಮಾನವರೆಲ್ಲ ಭಜಿಸಿರೋ"

"ನಂದತೀರ್ಥರ ಮತದೊಳಗೆ ಬಂದವರೆಲ್ಲಾ
ಎಂದಿಗಾದರು ಪರಮಾನಂದ ಪೊಂದುವರು"

"ಪರಮಪದವೀಯುವ ಗುರುಮುಖ್ಯಪ್ರಾಣನ
ಧರೆಯೊಳಗುಳ್ಳ ಮಾನವರೆಲ್ಲ ಭಜಿಸಿರೋ
ಅಂದು ತ್ರೇತೆಯಲಿ ಹನುಮನಾಗಿ ಅವತರಿಸಿ
ಬಂದು ದಾಶರಥಿಯ ಪಾದಕೆರಗಿ
ಸಿಂಧುವನೆ ದಾಟಿ ಮುದ್ರಿಕೆಯಿತ್ತು ದಾನವರ
ವೃಂದ ಪಾರ ದಹಿಸಿ ಚೂಡಾಮಣಿಯ ತಂದವನ ೧

ದ್ವಾಪರಯುಗದಿ ಭೀಮಸೇನನೆನಿಸಿ
ಶ್ರೀಪತಿಯ ಪಾದ ಕಡುಭಜಕನಾಗಿ
ಕೋಪಾವೇಶದಿ ದುಃಶಾಸನನನು ಸೀಳಿ
ಭೂಪರ ಬಲದೊಳಗೆ ಜರೆಜರೆದು ಕರೆದವನ ೨

ಕಲಿಯುಗದಲಿ ತುರೀಯಾಶ್ರಮವನೆ ಧರಿಸಿ
ಕಲುಷದ ಮಾಯಿಗಳನು ಸೋಲಿಸಿ
ಖಿಲವಾದ ಮಧ್ವಮತವನೆ ನಿಲಿಸಿ ಕಾಗಿ--
ನೆಲೆಯಾದಿಕೇಶವ ಪರದೈವನೆಂದೆನಿಸುವನ ೩

ಕನಕದಾಸರ ಜೀವನ ಚರಿತ್ರೆಯಲ್ಲಿ ವ್ಯಾಸರಾಯರ, ವಾದಿರಾಜರ ಪಾತ್ರ ಮತ್ತು ಉಡುಪಿಯ ಕೃಷ್ಣನ ಸನ್ನಿಧಿಯಲ್ಲಿ ನಡೆದ ಘಟನೆ, ಇಂದಿಗೂ ಕನಕನ ಕಿಂಡಿ ಎಂದು ಹೆಸರು ಹೊತ್ತು ಹಳೆಯ ಇತಿಹಾಸವನ್ನು ನೆನಪಿಸುವ ಆ ಕಿಂಡಿ ಇವೆಲ್ಲ ಕನಕದಾಸರು ಕೊನೆಯದಾಗಿ ಮಾಧ್ವದರ್ಶನವನ್ನು ಒಪ್ಪಿ ಆಚರಣೆಗೆ ತಂದರು ಎನ್ನುವುದಕ್ಕೆ ಬಲವಾದ ದಾಖಲೆಗಳು.

ಆದರೆ ಅಚ್ಚರಿಯೆಂದರೆ ಕನಕದಾಸರು ವ್ಯಾಸರಾಯರ ಮೇಲಾಗಲಿ, ವಾದಿರಾಜರ ಮೇಲಾಗಲಿ ಬರೆದ ಪದ್ಯಗಳು ದೊರಕುವುದಿಲ್ಲ. ಉಡುಪಿಯ ಬಗ್ಗೆ ಕೂಡ ಒಂದೆರಡು ಪದ್ಯಗಳಷ್ಟೆ ಸಿಗುತ್ತವೆ. ಬಹಳ ಮಹತ್ವದ ಒಂದು ಹಾಡನ್ನು ಇಲ್ಲಿ ಉಲ್ಲೇಖಿಸಬಹುದು :

ಪೂರ್ವಜನ್ಮದಲಿ ನಾಮಾಡಿದಾ ಭವದಿಂದ
ಉರ್ವಿಯೊಳು ಜನಿಸಿದೆನೊ ಕೃಷ್ಣಾ
ಕಾರುಣ್ಯನಿಧಿಯೆನ್ನ ಕಾಯಬೇಕಯ್ಯ ಹರಿ
ವಾರಿಜನಾಭನೇ ಮುದ್ದು ಕೃಷ್ಣ
ಕಷ್ಟ ದಾರಿದ್ರ್ಯವನು ಪರಿಹರಿಸದಿರೆ ದೂರು
ಮುಟ್ಟುವುದು ನಿನಗಯ್ಯ ಕೃಷ್ಣ
ಲೋಕದೊಳಗೆನ್ನನ್ನು ಪೋಲ್ವ ಪಾಪಿಗಳನ್ನು
ನೀ ಕಂಡು ಬಲ್ಲೆಯಾ ಕೃಷ್ಣ
ಪಿನಾಕಿಸಖನಾದಿಕೇಶವನೆ ಉಡುಪಿಯ ವಾಸ
ಸಾಕಿ ಸಲಹೈ ಎನ್ನ ಕೃಷ್ಣಾ

ಪಕ್ಕದಲ್ಲಿ ಶಿವಾಲಯವಿದ್ದು ಶಿವನ ಜತೆಗೆ ವಾಸವಾಗಿರುವ ಉಡುಪಿಯ ಕೃಷ್ಣನನ್ನು ಪಿನಾಕಿಸಖ ಎಂದು ಕರೆದಿರುವುದು ತುಂಬ ಔಚಿತ್ಯಪೂರ್ಣ. ಆದರೆ ಉಡುಪಿ

ಯಲ್ಲಿ ನಡೆದ ಘಟನೆಯ ಕುರಿತು ಮಾತ್ರ ಕನಕದಾಸರು ಮೌನ ವಹಿಸಿದ್ದಾರೆ. ಅದರ ಬಗ್ಗೆ ಯಾವ ಸುಳಿವನ್ನು ಅವರು ನೀಡುವುದಿಲ್ಲ.

'ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ' ಎನ್ನುವ ಹಾಡು ಉಡುಪಿಯ ಘಟನೆಗೆ ಸಂಬಂಧಪಟ್ಟದ್ದೆಂದು ಸಿನಿಮಾಯವಾಗಿ ಕಥೆ ಕಾವ್ಯವಾಗಿದ್ದರೂ ಅದು ಉಡುಪಿಯಲ್ಲಿ ಬರೆದ ಹಾಡಲ್ಲ. ಅವರು ಉಡುಪಿಯಲ್ಲಿದ್ದಾಗ ಒಂದು ರಾತ್ರಿ ಭೂಕಂಪವಾಗಿ ಗೋಡೆಯೊಡೆದು ಕೃಷ್ಣದರ್ಶನವಾಯಿತು. ಅದೇ ಮುಂದೆ ಕನಕನ ಕಿಂಡಿಯಾಯಿತು -- ಎನ್ನುವ ಕಥೆಯನ್ನು ಸೂಚಿಸುವ ಹಾಡೊಂದು ಬಳಕೆಯಲ್ಲೇನೋ ಇದೆ :

ನಡುರಾತ್ರಿಯಲಿ ನಡುಗಿದಳು ಪೊಡವಿಗೊಡೆಯನರಾಣಿ ಪರಮಕಲ್ಯಾಣಿ

ಆದರೆ ಈ ಪದ್ಯವನ್ನು ಅವರು ತಿರುಪತಿಯಲ್ಲಿ ರಚಿಸಿದ್ದಾರೆ, ಉಡುಪಿಯಲ್ಲಲ್ಲ. ಬಹಳ ಎಂದರೆ ಉಡುಪಿಯ ಘಟನೆಯನ್ನು ನೆನೆದು ತಿರುಪತಿಯಲ್ಲಿ ಹಾಡಿದರು ಎಂದು ಕೊಳ್ಳಬೇಕು. ಏನೇ ಇದ್ದರೂ ಅವರ ಪದ್ಯಗಳೇ ಸ್ಫುಟವಾಗಿ ಹೇಳುವಂತೆ ಆಚಾರ್ಯ ಮಧ್ವರೇ ಅವರ ಕೊನೆಯ ಸಾಧನೆಯ ಗುರುಗಳಾಗಿ ನಿಂತರು; ಅವರ ತತ್ವಜ್ಞಾನವೇ ಅವರ ಸಾಧನೆಗೆ ದಾರಿದೀಪವಾಯಿತು ಎನ್ನುವುದು ಮಾತ್ರ ನಿಶ್ಚಿತ.

ಈ ನಿಟ್ಟಿನಲ್ಲಿ ಅವರ ಕೆಲವು ಪದ್ಯಗಳನ್ನು ಈ ಹಿಂದೆಯೇ ಗಮನಿಸಿದ್ದೇವೆ. ಉಪನಿಷತ್ತಿನ ಆಳವಾದ ಅಧ್ಯಾತ್ಮವನ್ನು ಅವರು ಕನ್ನಡದಲ್ಲಿ ಹಿಡಿದಿಟ್ಟ ಬಗೆ ಅಪೂರ್ವವಾದದ್ದು. ಅವರು ತಾನು 'ಓದು ಬರೆಹ ಕಲಿತವನಲ್ಲ' ಎಂದು ಹೇಳಿಕೊಂಡಿದ್ದರೂ ಜ್ಞಾನದ -- ಅನುಭವದ ಗಣಿಯೆ ಆಗಿದ್ದರು ಎನ್ನುವುದನ್ನು ಅವರ ಪದ್ಯಗಳೇ ಸಾರುತ್ತವೆ :

ಕಿಂಡಿಗಳು ಒಂಬತ್ತು ಕಳಬಂಟರೈವರು
ಅಂಡಲೆವುದೊತ್ತಿನಲಿ ಷಡ್ವರ್ಗವು
ಎಂದಿದ್ದರೀ ಕೊಂಪೆ ಎನಗೆ ನಂಬಿಕೆಯಿರದು
ಮುಂದರಿತು ಹರಿಪಾದ ಹೊಂದುವುದು ಲೇಸು

ದೇಹವನ್ನು 'ನವದ್ವಾರ ಪಾರ' ಎಂದು ಶಾಸ್ತ್ರಗಳು ಕರೆದರೆ ಇವರು ಕಿಂಡಿಗಳೊಂಬತ್ತು ಎನ್ನುತ್ತಾರೆ. ಅದರಲ್ಲಿ ಪಂಚೇಂದ್ರಿಯಗಳೆಂಬ ಕಳಬಂಟರೈವರು. ಜತೆಗೆ ಅಂಡಲೆವ ಅರಿಷಡ್ವರ್ಗ.

ಈ ಕಳನಾಟರೆ ಇನ್ನೊಂದು ಹಾಡಿನಲ್ಲಿ ಕಣ್ಣಿಲ್ಲದ ಕುರುಡರಾಗಿದ್ದಾರೆ :

ಗಾಣದೆತ್ತಿನಂತೆ ಕಣ್ಣು ಮುಚ್ಚಿ ಪ್ರದಕ್ಷಿಣೆಯ ಮಾಡಿ
ಕಾಣದೆ ತಿರುಗುವೆನು ಎರಡು ಕಣ್ಣಿದ್ದು ನಾನು

ಮಾಣಿಕ್ಯದ ರಾಶಿಯಲ್ಲಿ ಅಂಧಕರೈವರ ಕೂಡಿ
ಅಣಿಮುತ್ತ ಹಿಡಿಹಿಡಿದು ಬಿಡುವ ಭ್ರಮಿತ ನಾನಯ್ಯ

ಈ ಕಳ್ಳಕುರುಡ ಬಂಟರ ಸಹವಾಸ ಎಸಿತು ಜನ್ಮಗಳಿಂದ ನಡೆದು ಬಂದಿದೆ :

ಹಲವು ಜನ್ಮದ ತಾಯಿ ಎನಗಿತ್ತ ಮೊಲೆಹಾಲು
ನಲಿದು ಉಂಟಾಗ ಹನಿನೆಲಕೆ ಬಿದ್ದುದ ಕೂಡಿ
ಅಳೆದು ನೋಡಿದರೆ ಕ್ಷೀರಾಂಬುಧಿಗೆ
ಇಮ್ಮಿಗಿಲು ಬಳಿಕಳುವ ನಯನ ಜಲವು
ತಿಳಿದು ನೋಡಿದರೆ ಲವಣಾರ್ಣವಕೆ ಮೂರು ಮಡಿ
ಎಲುವು ನರಗಳು ಕೂಡಿ ಮೇರುವಿಗೆ ನಾಲ್ಕುಮಡಿ
ಸುಲಿದು ಚರ್ಮವ ಹಾಸಿದರೆ ಭೂಮಿಗೈದು
ಮಡಿ ನೆಲೆಯಾವುದೀ ದೇಹಕೆ ?

ಅದರಿಂದ :

ಹರಣ ಹಿಂಗದಮುನ್ನ ಹರಿಯ ಸೇವೆಯ ಮಾಡು
ಪರಲೋಕ ಸಾಧನವ ಮಾಡು
ಕರುಣಿ ಕೃಪಾಳು ಕಾಗಿನೆಲೆಯಾದಿಕೇಶವನ
ಚರಣ ಕಮಲವ ನಂಬಿ ಸುಖಿಯಾಗು ಮನವೆ

"ತದಲಂ ಬಹುಲೋಕವಿ ಚಿಂತನಯಾ ಪ್ರವಣಂಕುರು ಮಾನಸಮೀಶಪದೇ" ಎಂಬ ಆಚಾರ್ಯರ ಸಂದೇಶವನ್ನೆ ಇವರು ತನ್ನ ಕೀರ್ತನೆಗಳಲ್ಲಿ ತುಂಬಿ ಹೀಗೆ ಸುಂದರವಾಗಿ, ಕಾವ್ಯಮಯವಾಗಿ ಮನಸ್ಸಿಗೆ ತಟ್ಟುವಂತೆ, ಮುಟ್ಟುವಂತೆ ಬಣ್ಣಿಸುತ್ತಾರೆ."

ಧರ್ಮದ ಹೆಸರಿನಲ್ಲಿ ನಡೆಯುವ ಅಂಧಶ್ರದ್ಧೆಯ ದುರುಪಯೋಗವನ್ನು ಕನಕದಾಸರು ಸಮರ್ಥವಾಗಿ ಖಂಡಿಸುತ್ತಾರೆ. ಇಂದಿಗೂ ನಡೆಯುತ್ತಿರುವ ಬತ್ತಲೆ ಸೇವೆ, ಸಿಡಿಸೇವೆಗಳಂಥ ಮೂಢನಂಬಿಕೆಗಳನ್ನು ಅವರು 4 ಶತಕಗಳ ಮೊದಲೇ ಖಂಡಿಸಿ ಜನರನ್ನು ಎಚ್ಚರಿಗೊಳಿಸಲು ಪ್ರಯತ್ನಿಸಿದ್ದಾರೆ :

ಕ್ಷೀರ ಶಾಸ್ತ್ರಾರ್ಥವ ಪರಿಗ್ರಹಿಸುತೆ ಕುರಿ
ಕೋಣಗಳ ತಲೆ ಚೆಂಡನಾಡಿ
ಪ್ರಾಣಹತ್ಯವ ಮಾಳ್ಪುದಾವ ಸತ್‌ಕರ್ಮವೋ
ಶ್ರೀನಿವಾಸನ ನಾಮಸ್ಮರಣೆಯ ಮಾಡೋ

ಕುಟ್ಟಿಕೊಳ್ಳದಿರಿ ಜಟ್ಟಿಗುಂಡಿನಲಿ
ಚುಚ್ಚಿಕೊಳ್ಳದಿರಿ ಬೆನಲಿ ಸಿಡಿಯನು

ಗುಟ್ಟಿನಲಿ ಗೋಪಾಲನ ಸ್ಮರಿಸೋ

ಗೋವಿಂದ ಗೋವಿಂದ ಎನ್ನಲರಿಯದೆ ವೃಥಾ
ನೋವಿಂದ ಭಂಗವ ಪಡುವುದುಚಿತವೆ?

ಬಾಳುತಿಪ್ಪ ಕುರಿಯ ಕೋಣವ
ಬೀಳು ಬೀಳು ಕೊರಳ ಕೊಯ್ಕಿ
ಬೀಳಬೇಡಿ ನರಕಕೆಂದು ಹೇಳಬಂದೆನೋ
ಸುತ್ತಲವರ ಮಾತ ಕೇಳಿ
ಗುತ್ತಿಯ ಎಲ್ಲಮ್ಮಗ್ತೊಲಿದು
ಬತ್ತಲಿಂದ ಬಂದವಳ ನೋಡಿ ಎಲ್ಲರು

ತನ್ನ ಸಮಾಜದಲ್ಲೆ ಹೆಚ್ಚಾಗಿ ನಡೆಯುತ್ತಿದ್ದ ಇಂಥ ಕಂದಾಚಾರಗಳನ್ನು ಖಂಡಿಸಿ ಸಮಾಜವನ್ನು ತಿದ್ದುವ ಕಳಕಳಿ ಅವರ ಪದ್ಯಗಳಲ್ಲಿ ಸ್ಫುಟವಾಗಿ ಮೂಡಿದೆ. "ಠಕ್ಕುದೇವರ ಗೊಡವೆ ಬೇಡ ನರಕ ತಪ್ಪದು".

ತನ್ನ ಸಮಾಜದವರನ್ನಷ್ಟೆ ಅಲ್ಲ; ಮೇಲ್ವರ್ಗದವರ ಠಕ್ಕು ಸೋಗುಗಳನ್ನು ಅವರು ಅಷ್ಟೇ ಪ್ರಾಮಾಣಿಕವಾದ ನಿರ್ಭೀತಿಯಿಂದ ಬಯಲಿಗೆಳೆದಿದ್ದಾರೆ :

ದುಂಡುನಾಮವ ಬರೆದು ಭಂಡತನದಿ ಜಗದಿ
ದಂಡಿಗೆ ಬೆತ್ತ ಪಿಡಿದವನಾ ಹೆಂಡಿರ ಕಾಯ್ವನು
ಪಕ್ಷಿವಾಹನನ ಗುಣ ಲೆಕ್ಕಿಸಿ ಪೊಗಳದೆ
ಬೆಕ್ಕಸ ಬೆರಗಾಗಿ ಅಕ್ಕಿಗೆ ತಿರುಗೂವವ
ಹೇಗೆ ನೀ ದಾಸನಾದೆ ಹೇಪ್ರಾಣಿ
ಹೇಗೆ ನೀ ದಾಸನಾದೆ ?

ಒಟ್ಟಿನಲ್ಲಿ ಕನಕದಾಸರದು ಶುದ್ಧ ವೈದಿಕವಾದ ಉಪಾಸನೆಯ ಮಾರ್ಗ. "ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯ ಮುಚ್ಯತೇ" ಎಂದು ಉಪನಿಷತ್ತು ಸಾರಿದಂತೆ ಅವರೂ ವೇದಮೂಲವಾದ ಉಪಾಸನೆಗೇ ಒತ್ತು ನೀಡುತ್ತಾರೆ :

ಉತ್ತಮ ಅಉಮ ಎಂಬ ಓಂಕಾರ ಬೀಜಾಕ್ಷರ
ಚಿತ್ತದಲಿ ಗ್ರಹಿಸು ನೀ ಬಿಡಬೇಡ ಬಿಟ್ಟು ಕೆಡಬೇಡ

ಅದರಲ್ಲು ಪುನಃ ಮಾಯಾವಾದದ ದಾರಿಯಲ್ಲಿ ಸಾಗದೆ ಆಚಾರ್ಯಮಧ್ವರ ಉಪನಿಷನ್ಮಾರ್ಗದಲ್ಲೆ ಸಾಗಬೇಕು ಎಂದು ಎಚ್ಚರಿಸುತ್ತಾರೆ :

ಗಾರುಡಿಯ ಮತ ಬಿಟ್ಟು ನಾದಬ್ರಹ್ಮನ ಪಿಡಿದು
ಸಾರಿಸಾರಿ ಮುಕ್ತಿಯನ್ನು ಶಮನದಿಂದ ಮತ್ತೆ ಸುಮನದಿಂದ

ಇದೊಂದು ಸ್ಥೂಲ ಸಮೀಕ್ಷೆ ಮಾತ್ರ, ಕನಕದಾಸರ ಹತ್ತಾರು ಹಾಡುಗಳಲ್ಲಿ ಅ
ರ್ಯಮಧ್ವರ ಸಿದ್ಧಾಂತದ ಅನುಸರಣೆ ಸ್ಫುಟವಾಗಿ ಕಾಣುತ್ತದೆ. ಮಾಧ್ವ ಅನುಭಾ
ರಂಪರೆಯಲ್ಲಿ ದಾಸಪಂಥದಲ್ಲಿ ಏಕಮಾತ್ರ ಅನುಭಾವಿ ದಾಸರಾದ ಕನಕದಾಸರ ಸ
ಅತ್ಯಂತ ಉನ್ನತವಾದದ್ದು.

* * * * *

